# ಸಂಕ್ರಮಣ

ಕನ್ನಡದ ಸಣ್ಣ ಕತೆಗಳು : ವಿಶೇಷ ಸಂಚಿಕೆ



# ಸಂಚಯ

ಸಾಂಸ್ಕೃತಿಕ ಸಂಕಲನ | ಸಂಪುಟ : 7
ದ್ವೈಮಾಸಿಕ | ಅಕ್ಟೋಬರ್ 1994 | ಸಂಚಿಕೆ : 2

ಸಂಪಾದಕರು :

ಡಿ. ವಿ. ಪ್ರಹ್ಲಾದ್
ರವಿಕುಮಾರ ಕಾಶಿ
ಎನ್. ಎಸ್. ಶ್ರೀಧರಮೂರ್ತಿ

ಪ್ರಕಟಣೆ : ಸಂಚಯ ಬಳಗ

ಅರ್ಪಣೆ :

ಈ ವಿಶೇಷ ಸಂಚಿಕೆ ಅರಳುವ ಮೊದಲೇ ಅಗಲಿದ
ದೈತ್ಯ ಪ್ರತಿಭೆಯ ಕೆ. ವೆಂಕಟೇಶ್ ನೆನಪಿಗೆ

ಚಂದಾ ವಿವರ :

ವಾರ್ಷಿಕ : ರೂ. 50-00
ಆಜೀವ : ರೂ. 450-00 (ಮೂರು ಕಂತುಗಳಲ್ಲಿ)

ಸಂಚಯದ ವಿಳಾಸ

24/D, 17ನೇ ಮುಖ್ಯ ರಸ್ತೆ, ಮುನೇಶ್ವರ ಬ್ಲಾಕ್
ಜಿ.ಇ ಎಫ್. ಅಂಚೆ, ಬೆಂಗಳೂರು-560 026

ಮುಖಪುಟ : ಪಿಕಾಸೋನ ರೇಖಾ ಚಿತ್ರ 'ಗೂಳಿ'

# ಸಾತತ್ಯ

## ಮಳೆ ನಿಂತ ಮೇಲೆ....

ಪ್ರಿಯ ಓದುಗರೇ,

ಕೆಲವು ದಿನಗಳಿಂದ ಸಂಜೆಗೆ ತಪ್ಪದ ಅತಿಥಿಯ ಹಾಗೆ ಧೋಗುಡುತ್ತಾ ಮಳೆ ಸುರಿಯುತ್ತಿದೆ. ಇದರ ಜೊತೆಗೂಡಿದ ಛಳಿಯು ತಲ್ಲಣಕ್ಕೆ ಜನ ಮನೆಗಳೊಳಗೇ ಮುದುರಿ ಕೂರುವ ಮನಃಸ್ಥಿತಿ ಹುಟ್ಟಿಸುತ್ತಿದೆ. ನನ್ನ ಮಟ್ಟಿಗಂತೂ ಈ ಸಂಚಿಕೆ ರೂಪಿಸುವಾಗಿನ ಅನುಭವ ಮತ್ತೆ ಮತ್ತೆ ಮೆಲುಕು ಹಾಕುವಂಥಾದ್ದು. ಅಷ್ಟೇನೂ ಪ್ರಮುಖವಲ್ಲ ಎಂದು ನಮ್ಮ ಸಾಹಿತ್ಯ ವಿದ್ವಾಂಸರು ಗುರ್ತಿಸುವ ಆದರೆ ಕವಿತೆಯಷ್ಟೇ ಪ್ರಬಲವಾಗಿ ಬೆಳೆದ ಸಣ್ಣ ಕತೆಗಳನ್ನ ಕುರಿತು ಈ ಸಂಚಿಕೆಗಾಗಿ ಅಧ್ಯಯನ-ತಯಾರಿ ನಡೆಸುವಾಗ ವಿಶಿಷ್ಟವಾದ ಕತೆಯು ಇತಿಹಾಸ-ಆಸಕ್ತಿ ಹುಟ್ಟಿಸುವ ಭವಿಷ್ಯಗಳು ಕಂಡುಬಂತು. ಬೆಳೆಯುತ್ತಿರುವ ಪತ್ರಿಕೋದ್ಯಮ, ಹೆಚ್ಚಾಗುತ್ತಿರುವ ಹೊಸ ಕತೆಗಾರರು ಇವೆಲ್ಲವೂ ಸಣ್ಣ ಕತೆಯ ಕತೆಯನ್ನು ಆಶಾದಾಯಕವಾಗಿಸುತ್ತಿವೆ. ಇವುಗಳ ಜೊತೆಗೆ ಬೆಚ್ಚಿ ಬೀಳಿಸುವ ನಮ್ಮ ಪತ್ರಿಕೆಗಳ ಹಾಗೂ ಓದುಗರ ಅಭಿರುಚಿಯ ಮಟ್ಟವೂ ಗಮನಕ್ಕೆ ರಾಚದೇ ಹೋಗಲಾರವು.

ಕನ್ನಡದ ಕತೆಯು ಹುಟ್ಟಿನ ಪ್ರೇರಣೆಗಳು ಯಾವುವೆಂಬುದು ಈಗಾಗಲೇ ಸಾಕಷ್ಟು ಚರ್ಚೆಯಾದ ಇತಿಹಾಸವಾದ ವರದಿ, ಸಣ್ಣ ಕತೆಯ ಸ್ವರೂಪದ ಪ್ರೇರಣೆಗಳು ನಮ್ಮದೇ ಪರಂಪರೆಯ ಫಲ ಎಂದು ಕೆಲವರ ಅಭಿಮತವಾದರೆ, ಜೊತೆಗೆ ಅದಕ್ಕೆ ಪಶ್ಚಿಮದ ಪ್ರಭಾವವೂ ಇತ್ತೆಂದು ಗುರುತಿಸಲಾಗುತ್ತದೆ. ಇದರ ಜೊತೆಗೇ ಆ ಕಾಲಕ್ಕೆ ಬಂಗಾಳದಿಂದ ಅನುವಾದಿಸಿದ ಸಣ್ಣ ಕತೆಗಳ ಪ್ರಭಾವವೂ ಜೊತೆಗೂಡಿ ಈ ಮೂರು ಅಂಶಗಳೂ ಒಟ್ಟಾಗಿ ನಮ್ಮಲ್ಲಿನ ಸಣ್ಣ ಕತೆಗಳ ಪಾಕಕ್ಕೆ ಮಾಸ್ತಿಯಂಥವರನ್ನು ಪ್ರಭಾವಗೊಳಿಸಿರಬೇಕು.

ಪ್ರಾರಂಭದ ನವೋದಯದ ಕತೆಗಳಲ್ಲಿ ಪ್ರಮುಖವಾಗಿ ಒಪ್ಪಿತವಾದ ಅಥವಾ ಸಾಮಾಜಿಕ ನಂಬಿಕೆಗೆ ಒಳಗಾದ ಮೌಲ್ಯಗಳ ಬಗೆಗಿನ ಕಾಳಜಿ ಪ್ರೀತಿ ಪ್ರತಿಪಾದನೆಗಳು ಕಂಡುಬಂದವು. ಇತರರಿಗೆ ತೊಡಕಾದ ಅಭಿವ್ಯಕ್ತಿಯ ಕ್ರಮ ಮಾಸ್ತಿಯಂಥವರನ್ನ ಭಾರತೀಯ ಕಥನ ಕ್ರಮಕ್ಕೆ ಅನುಗುಣವಾಗಿ ಬರೆಯಲು ರೂಪಿಸಿತು. ನಂತರದ

ಪ್ರಗತಿಶೀಲ ಲೇಖಕರಿಗೆ, ಸಣ್ಣ ಕತೆ ಮುಖ್ಯ ಅಭಿವ್ಯಕ್ತಿಯ ಮಾಧ್ಯಮವಾಗಿ, ಸಮಾಜದ ಓರೆಕೋರೆಗಳನ್ನ ಬೆಳಕಿಗೆ ದಬ್ಬಿ ಇದು ಹೀಗೇಕೆ ಎಂದು ಪ್ರಶ್ನಿಸುವ ಮಾನವೀಯ ಅನುಕಂಪ ಸಿಟ್ಟು ಮುಖ್ಯವಾಯಿತು. ಮುಂದೆ ನವ್ಯದಲ್ಲಿ ತಂತ್ರ ಹಾಗೂ ಅಭಿವ್ಯಕ್ತಿ ಕ್ರಮಗಳೇ ಮುಖ್ಯವಾಗಿ. ಸಾಂಕೇತಿಕತೆ ಗದ್ಯದ ವಿವರಣೆಯ ಶಕ್ತಿಯನ್ನೂ ಮೀರಿಸಿ ಕೊನೆಗೆ ಕ್ಲೀಷೆಯಾಯಿತು. ನವ್ಯದ ತಂತ್ರ ಹಾಗೂ ಕತೆಗಾರಿಕೆಯ ಕ್ರಮಕ್ಕೆ ಉತ್ತರ ವಾಗಿ ಜನಪರ ಧೋರಣೆಗಳ ದಲಿತ ಬಂಡಾಯ ಚಳುವಳಿಗಳು ಹೊಸ ಹೊಸ ಅನುಭವ ಲೋಕಗಳನ್ನ ಬಿಡಿಸಿಟ್ಟವು. ಬಂಡಾಯದ ಬರಹಗಳು ಘೋಷಣೆಯ ಗಟ್ಟಿದನಿಯ ಮಾತಾಯಿತೇ ಹೊರತು ಸಶಕ್ತ ಕಲಾತ್ಮಕವಾದ ಅಭಿವ್ಯಕ್ತಿಯಾಗಲೀ ಹೊಸ ರೀತಿಯ ಅಭಿವ್ಯಕ್ತಿಯ ಸಾಧ್ಯತೆಗಳಾಗಲೀ ರೂಪುಗೊಳ್ಳಲಿಲ್ಲ.

ಕನ್ನಡದ ಮಟ್ಟಿಗೆ ಚಳುವಳಿಗಳ ಜಡಿಮಳೆ ತಗ್ಗಿದೆ. ಕ್ಷೀಣಗೊಳ್ಳುತ್ತಿರುವ ಅವುಗಳ ಪ್ರಭಾವಗಳು ಲೇಖಕರಿಗೆ ಇನ್ನಷ್ಟು ಸಹಜತೆ ಸ್ವಾತಂತ್ರ್ಯ ಒದಗಿಸಬಹುದಾಗಿದೆ. ಆತ್ಮ ನಿರೀಕ್ಷಣೆ–ತಂತ್ರ ಹಾಗೂ ಕಲಾತ್ಮಕತೆ ಕುರಿತು ಹೆಚ್ಚು ಪ್ರಾಮುಖ್ಯ ನೀಡಿ ಸೃಜಿಸಲು ಒಟ್ಟಾಗಿ ಬರೆಯುತ್ತಿರುವ ಈಗಿನ ಎಲ್ಲ ತಲೆಮಾರಿನ ಲೇಖಕರಿಗೂ ಇಂದು ಸಮಾನ ಸಾಧ್ಯತೆಗಳಿವೆ. ಚಳುವಳಿಗಳು ಕ್ಷೀಣಗೊಂಡರೆ ಬರಹಗಾರನ ಸತ್ವವೇನೂ ಕ್ಷೀಣಗೊಂಡ ಹಾಗಲ್ಲ. ದಲಿತ–ಬಂಡಾಯದ ಕತೆಗಾರರಲ್ಲೂ ಪ್ರತಿಭಾವಂತರಿಗೇನೂ ಕೊರತೆಯಿಲ್ಲ ಚಳುವಳಿಯ ಪ್ರಖರತೆಯಲ್ಲಿ ಒಂದು ಒತ್ತಿನಿಂದ ಮತ್ತೊಂದರ ಕಡೆಗೆ ತುಯ್ಯುವ ಸಮರ್ಥಿಸಿಕೊಳ್ಳುವ ಅನಿವಾರ್ಯತೆ ಈಗಿಲ್ಲ. ಇಲ್ಲದ ದಲಿತ–ನವ್ಯಪ್ರಜ್ಞೆಗಳನ್ನು ಗುರುತಿಸುವ ವಿಮರ್ಶೆಗಳಾಗಲೀ ಅಥವಾ ಯಾವ ಯಾವ ಚಳುವಳಿಯ ಎಷ್ಟೆಷ್ಟು ಪರ್ಸೆಂಟ್ ಪ್ರಭಾವವೆಂದು ಗುರುತಿಸಿಕೊಂಡು ಹುಟ್ಟುವ ಬರಹಗಳಾಗಲೀ ಇಲ್ಲದ, ಸೃಜವಾದ ಸಹಜವಾದ ಮನುಷ್ಯನ ಬದುಕಿನ ಎಲ್ಲ ಸಿಹಿಕಹಿಗಳನ್ನು ಬಿಂಬಿಸಲು ಸಾಧ್ಯವೆ ? ನಿಜಕ್ಕೂ ಇವು ಮಳೆ ನಿಂತಮೇಲಿನ ಆಲೋಚನೆಗಳೇ! ಇವುಗಳ ಜೊತೆಗೇ ಚಳುವಳಿಗಳ ಹೆಸರಲ್ಲಿ ಲೇಖಕರನ್ನ ಸಮೀಕರಿಸಿ ಉಳಿದ ಅನೇಕ ಲೇಖಕರು ಚರ್ಚೆ ಯಾಗದೇ ಉಳಿದಿದ್ದಾರೆ. ಸಮರ್ಥವಾಗಿ ಬರೆದ ಅವರತ್ತ ನಮ್ಮ ವಿಮರ್ಶೆಯ ದೃಷ್ಟಿ ಹೊರಳಬೇಕಿದೆ.

ಕನ್ನಡ ಕತೆಯ ಮುಂದಿನ ದಿಕ್ಕು ಎಂಬ ನೀಲಿನಕ್ಷೆ (Blue Print) ಕಷ್ಟವೇ. ಮತ್ತೆ ಪುರಾಣಕ್ಕೆ (ಪುರಾಣದ ಕಥನ ಕ್ರಮಕ್ಕೆ) ಹೋಗುವ ಅಥವಾ ಫ್ಯಾಂಟಸಿಗೆ ಜಾರುವ ಮೂಲಕ ಒಂದು ಹೊಸ ಚಳುವಳಿಯ ಸ್ವರೂಪ ಹರಳುಗಟ್ಟುತ್ತಿದೆ ಎನ್ನುವುದು ಅಷ್ಟೇನು ಸಂಗತವಾದ ನಿರೀಕ್ಷೆಯಲ್ಲ. ಫ್ಯಾಂಟಸಿಯ ತಂತ್ರದಿಂದಾಗಲೀ ಪುರಾಣದ ಕಥನ ಕ್ರಮದಿಂದಾಗಲೀ ಇಂಗ್ಲೀಷ್ ವಸಾಹತುಶಾಹಿಯ ಕ್ರಮದಿಂದ ನಾವು ಕಳಕೊಂಡ ತಂತ್ರದ ಹಾಗೂ ಪರಂಪರೆಯ ಮರುಗಳಿಕೆಯ ಯತ್ನ ಎನ್ನುವುದು

ಸಾಧ್ಯವೇನಲ್ಲ. ಕೆ.ವಿ. ಸುಬ್ಬಣ್ಣನವರು ಹೇಳುವಂತೆ ಭಾರತಕ್ಕೆ ಪಶ್ಚಿಮ ಸಾಂಸ್ಕೃತಿಯುದ್ಧು ಮಂಥನವೂ ಹೌದು ಮೈಥುನವೂ ಹೌದು, ಹಾಗೆಯೇ ಈ ಎಲ್ಲಾ ಪ್ರಕ್ರಿಯೆಗಳಿಂದ ಹುಟ್ಟಿರುವ ನಮ್ಮ ಕಥಾ ಪರಂಪರೆ ಈ ಎಲ್ಲವನ್ನೂ (ಪಶ್ಚಿಮದ ಪ್ರಭಾವ, ಪೂರ್ವದ ಸಮೃದ್ಧ ಅನುಭವ ಹಾಗೂ ಅಭಿವ್ಯಕ್ತಿಯ ದ್ರವ್ಯ) ತನ್ನೊಳಗೆ ಇಟ್ಟುಕೊಂಡು ತನ್ನದೇ ವರ್ತಮಾನದ ಒತ್ತಡಗಳ ನಡುವೆ ರೂಪು ಪಡೆಯಬೇಕಾಗಿದೆ, ಇವೆಲ್ಲದರ ಸಮ್ಮಿಶ್ರಣ ದಿಂದ ಹುಟ್ಟುವ ಯಾವುದೋ ಒಂದು ರೂಪು ಕನ್ನಡ ಕಥಾಲೋಕದ ಭವಿಷ್ಯದ ನೆಲವಾಗಲಿದೆ. ಅದಕ್ಕೆ ಮಳೆ ನಿಂತು ನೆಲ ಹದವಾಗಿದೆ.

ಈ ಸಂಚಿಕೆ ಕುರಿತು ಅದೇ ನಿಮ್ಮಲ್ಲಿ ನಾವು ಹೇಳಬೇಕಾದ್ದನ್ನು ಹೇಳಬಹುದೆನ್ನಿಸುತ್ತೆ. ಈ ರೂಪದಲ್ಲಿ ಇದನ್ನು ನಿಮ್ಮ ಕೈಗಿಡಲು ನಮಗೂ ಖುಷಿಯಾಗಿದೆ. ಈ ಸಂಚಿಕೆಯಿಂದ ಸಂಚಯ ಅಧಿಕೃತವಾದ ನೊಂದಣಿ ಹೊಂದಿದೆ, ಈ ಕಾರ್ಯಕ್ಕೆ ನಮ್ಮೊಡನೆ ಸಹಕರಿಸಿದ ಭಟ್ಕಳದ ಸುರೇಂದ್ರರಾಮನ್ ಅವರಿಗೆ ನಾವು ಕೃತಜ್ಞರು. ಜೊತೆಗೆ ಈ ಸಂಚಿಕೆಗೆ ಸಹಕರಿಸಿದ ಎಲ್ಲಾ ಲೇಖಕ ಮಿತ್ರರಿಗೂ ಸಂಚಯದ ಕೃತಜ್ಞತೆಗಳು.

ಸಂಚಯದ ಪರವಾಗಿ

**–ಡಿ. ವಿ. ಪ್ರಹ್ಲಾದ್**

## ಶ್ರದ್ಧಾಂಜಲಿ

ಕನ್ನಡದ ರಸಋಷಿ

## ಕುವೆಂಪು ಅವರಿಗೆ

## ಸಂವಹನ

# ಕತೆಗಾರರ ಜೊತೆ ಮಾತು-ಕತೆ

---

**ಭಾಗವಹಿಸಿದವರು : ಟಿ. ಜಿ. ರಾಘವ, ಕಾ. ತಾ. ಚಿಕ್ಕಣ್ಣ, ನೇಮಿಚಂದ್ರ**

ಇದು ಸಂಚಯ ನಡೆಸಿದ ಕಾರ್ಯಕ್ರಮದ ಬರಹರೂಪ. ಮೂವರು ವಿಭಿನ್ನ ನೆಲೆಗಳ ಕತೆಗಾರರು ಈ ಕಾರ್ಯಕ್ರಮದಲ್ಲಿ ತಮ್ಮ ಕತೆಗಳ ಹಿನ್ನೆಲೆ ಬರಹದ ಸಂತೋಷ ಹಾಗೂ ಕಷ್ಟಗಳನ್ನ ಅಲ್ಲಿದ್ದ ಪ್ರೇಕ್ಷಕರ ಜೊತೆಗೆ ಹಂಚಿಕೊಂಡರು.

ಟಿ. ಜಿ. ರಾಘವ ಅವರು ನಮ್ಮದ ಹಿನ್ನೆಲೆಯ ಹಿರಿಯ ಕತೆಗಾರ. ಅವರು ಬರೆದದ್ದು ಸ್ವಲ್ಪವೇ ಆದರೂ ತಮ್ಮ ಪ್ರಯೋಗಶೀಲತೆಯಿಂದ ಅವರು ಎಲ್ಲರ ಗಮನ ಸೆಳೆದವರು. ಚಲನಚಿತ್ರವಾದ ಅವರ 'ಮನೆ' ಹಾಗೂ ಇತರೆ ಬಿಡಿ ಕತೆಗಳಾದ 'ಶ್ರಾದ್ಧ', 'ಅಪ್ಪ', 'ಬೀಗದಕೈ' ಇತ್ಯಾದಿ ಕತೆಗಳು ತಟ್ಟನೆ ಎದುರು ನಿಲ್ಲುತ್ತವೆ. ಇತ್ತೀಚೆಗೆ ಇವರ ಸಮಗ್ರ ಕತೆಗಳ ಸಂಕಲನವೂ ಪ್ರಕಟಗೊಂಡಿದೆ. ನಮ್ಮಲ್ಲಿ ರಾಘವ ಅವರ ಬರಹಗಳು ಹೆಚ್ಚು ಚರ್ಚೆಗೆ ಒಳಗಾಗಿಲ್ಲ. ಕಾ. ತಾ. ಚಿಕ್ಕಣ್ಣ ಅವರು ಈಚಿನ ತಲೆಮಾರಿನವರಲ್ಲಿ ಒಬ್ಬರಾಗಿ ಗ್ರಾಮೀಣ ಬದುಕಿನ ಹಿನ್ನೆಲೆಯನ್ನು ಅನುಭವಗಳನ್ನು ಮೂಲ ದ್ರವ್ಯವಾಗಿಟ್ಟುಕೊಂಡು ಬರೆಯುತ್ತಿದ್ದಾರೆ. ಅವರ ಮೊದಲ ಕಥಾ ಸಂಕಲನ 'ವಾಸನಾಮಯ ಬದುಕಿನ ಆಚೆ ಈಚೆ' ಅನೇಕ ಓದುಗರ ಗಮನ ಸೆಳೆದಿತ್ತು. ಜೊತೆಗೆ 'ಮುಂಜಾವು' ಕಾದಂಬರಿಯನ್ನೂ ಹಾಗೂ ಈಚೆಗೆ ಒಂದು ಕಥಾ ಸಂಕಲನವನ್ನೂ ಚಿಕ್ಕಣ್ಣ ಪ್ರಕಟಿಸಿದ್ದಾರೆ. ಮಹಿಳೆಯರ ಎಚ್ಚೆತ್ತ ಮನೋಭಾವದ ಫಲರೂಪದ ಹಾಗೆ ನೇಮಿಚಂದ್ರ ತಮ್ಮ ಹೊಸರೀತಿಯ ವಸ್ತು ನಿರೂಪಣೆಯ ಮೂಲಕ ಗಮನಾರ್ಹ ಕತೆಗಾರ್ತಿ. ಎರಡು ಕಥಾಸಂಕಲನ ಹಾಗೂ ಬೆಳಗೆರೆ ಜಾನಕಮ್ಮ, ಮೇರಿಕ್ಯೂರಿ, ವ್ಯಾನ್‌ಗೋ ಮುಂತಾದವರ ಬಗೆಗಿನ ಜೀವನ ಚಿತ್ರದ ಬರಹಗಳಿಂದ ಅವರು ಎಲ್ಲರ ಗಮನ ಸೆಳೆದಿದ್ದಾರೆ. ವಿಭಿನ್ನ ವೃತ್ತಿ ಹಾಗೂ ಪ್ರವೃತ್ತಿ ಹೊಂದಿರುವ ನೇಮಿಚಂದ್ರ ಅವರದ್ದು ವಿಶಿಷ್ಟ ರೀತಿಯ ಬರವಣಿಗೆ. ಈ ಬರಹ ಸಿದ್ಧಪಡಿಸುವಲ್ಲಿ ನಮ್ಮೊಂದಿಗೆ ಸಹಕರಿಸಿದ ಮೂವರು ಕತೆಗಾರರಿಗೂ ಸಂಚಯದ ಕೃತಜ್ಞತೆಗಳು.

**ಪ್ರಹ್ಲಾದ್ :** ಈ ಮಾತು ಕತೆ ಆರಂಭಿಸುವ ಸಲುವಾಗಿ ತಮ್ಮ ಕತೆಗಳ ಹಿನ್ನೆಲೆಯನ್ನು ಹೇಳಿಕೊಳ್ಳುವುದು ಸಾಧ್ಯವೆ? ನೀವು ಕತೆಯನ್ನೇ ನಿಮ್ಮ ಮಾಧ್ಯಮವಾಗಿ ಆರಿಸಿಕೊಳ್ಳಲು ಕಾರಣ ಏನು?

**ನೇಮಿಚಂದ್ರ :** ನಾ ಬರೆಯೊದಕ್ಕೆ ಎರಡು ಉದ್ದೇಶಗಳಿವೆ. ಅಥವಾ ನನ್ನ ಅನುಭವಕ್ಕೆ ಬಂದಿರುವ ಎರಡು ಕಾರಣಗಳಿವೆ. ಒಂದು ಹಗುರಾಗುವುದಕ್ಕೆ,

ಇನ್ನೊಂದು ನನ್ನಲ್ಲಿ ಕೆಲವು ವಿಷಯಗಳಿವೆ, ವಿಚಾರಗಳಿವೆ ಅವನ್ನು ನಿಮ್ಮಲ್ಲಿ ತಲುಪಿಸಬೇಕಿದೆ, ತಿಳಿಸಬೇಕಿದೆ. ಹೀಗೆ ಹಂಚಿಕೊಳ್ಳುವುದಕ್ಕೆ ಕಥೆ ಒಂದು ಮಾಧ್ಯಮ ಅಷ್ಟೆ. ಅದನ್ನ ಲೇಖನ ರೂಪದಲ್ಲೂ ಬರೆಯಬಹುದು, ಸಿಕ್ಕಾಗ ಕೊರೆಯಬಹುದು. ಆದರೆ ಕತೆ ಏಕೆ ಅದಕ್ಕಿಂತಲೂ ಸಮರ್ಥವಾದದ್ದು ಅನ್ನಿಸಿದೆ ಎಂದರೆ ಕತೆ–ಕಲ್ಪನೆ ಕನಸು ವಾಸ್ತವ ಎಲ್ಲದರ ಸಮ್ಮಿಶ್ರಣವಾಗಿ ರೂಪುಗೊಳ್ಳುತ್ತದೆ. ಇನ್ನು ಹಗುರಾಗುವುದಕ್ಕೆ ಬರೆಯುವುದು ಅಂದೆ. ಅದನ್ನೆಲ್ಲಾ ಪ್ರಕಟಿಸಿದ್ದಿಲ್ಲ. ಒಂದು ರೀತಿ Tension ಕಳೆದುಕೊಳ್ಳಲು ಬರೆಯುವುದಿದೆ. ಈ ಹಗುರಾಗುವ ಪ್ರಕ್ರಿಯೆಯ ಅತ್ಯಂತ ವೈಯಕ್ತಿಕ ಬರಹ ಕೂಡಾ ಬಹಳಷ್ಟು ಸಾರಿ ಕತೆಯ ಹಂದರದಲ್ಲಿ ತೂರಿ ಬಂದದ್ದಿದೆ. 'ಮತ್ತೆ ಬರೆದ ಕವನಗಳು', 'ಸಾವಿನತ್ತ ಒಂದು ಹೆಜ್ಜೆ' ಇಂಥ ಎರಡು ಕತೆಗಳು. ಈ ಕತೆಗಳ ಸೋಲು ಗೆಲುವು ಏನೇ ಇರಲಿ, ಈ ಕತೆಗಳನ್ನು ಬರೆದಮೇಲೆ ನನಗೆ ಹಗುರಾದ ಅನುಭವವಾಯಿತು.

**ಪ್ರಹ್ಲಾದ್ :** ನಿಮ್ಮನ್ನು ಮಹಿಳಾ ಎಚ್ಚರದ ಬಗ್ಗೆ ಬರೆಯುವ ಸ್ತ್ರೀವಾದಿ ಲೇಖಕಿ ಎಂದು ಗುರುತಿಸುತ್ತಾರೆ, Conscious ಆಗಿ ನೀವು ಮಹಿಳೆಯರ ಬಗ್ಗೆ ಬರೆಯುತ್ತೀರಿ ಎಂದು ಹೇಳುವುದರ ಬಗ್ಗೆ ಏನು ಹೇಳುತ್ತೀರಿ ?

**ನೇಮಿಚಂದ್ರ :** ಸ್ತ್ರೀವಾದ ನಾನು ಬದುಕುವ ರೀತಿ, ಮೂಲಭೂತವಾಗಿ ಸ್ತ್ರೀವಾದ ಮಾನವತಾವಾದದ ಒಂದು ಅಂಗ. ಬದುಕಿಗಳವಡಿಸದ ಸ್ತ್ರೀವಾದದಲ್ಲಿ ನನಗೆ ನಂಬಿಕೆ ಇಲ್ಲ. ಜೀವನದಲ್ಲಿ ಹಾಸು ಹೊಕ್ಕಾಗಿ ಬಂದ ಯಾವುದೇ ಸಿದ್ಧಾಂತ ಖಂಡಿತಾ ನನ್ನ ಬರವಣಿಗೆಯ ಮೇಲೂ ಪ್ರಭಾವ ಬೀರಿರುತ್ತದೆ. ಆದರೆ ಸ್ತ್ರೀವಾದಕ್ಕಾಗಿಯೇ ಪ್ರತ್ಯೇಕ ಕತೆ ಬರೆದಿಲ್ಲ. ಕೃತಿ ಬೇರೆ ಕೃತಿಕಾರಗಳೇ ಬೇರೆ ಎನ್ನುವುದು ನನಗೆ ಅರ್ಥವಾಗುವುದಿಲ್ಲ.

**ಪ್ರಹ್ಲಾದ್ :** ರಾಘವ ಅವರಿಗೆ ಈ ಕುರಿತು ಏನನ್ನಿಸುತ್ತೆ ?

**ರಾಘವ :** ಹಗುರಾಗುವುದಕ್ಕೆ ನಾನು ಅತ್ತುಬಿಡ್ತೇನೆ, ಇಲ್ಲ ಜಗಳವಾಡ್ತೇನೆ, ಕತೆ ಬರೆಯುವುದಿಲ್ಲ. ಇರಲಿ, ನನಗೆ ಚಿಕ್ಕವಯಸ್ಸಿನಲ್ಲಿ Jokesಗಳು ತುಂಬಾ ಇಷ್ಟ ಒಂದಾವರ್ತಿ, ಚಿಕ್ಕಹುಡುಗ ನಾನು ಮಹಾರಾಜಾ ಕಾಲೇಜಿನಲ್ಲಿ ಒಂದು ನಾಟಕ ನೋಡಿದೆ. ನಾನು Jokes ಏನು ಕೇಳ್ಸಿದ್ದೆನೋ ಅದೆಲ್ಲಾ ಇತ್ತು ಅದರಲ್ಲಿ. ಆದರೆ ಅದನ್ನೆಲ್ಲಾ ಒಂದು Formನಲ್ಲಿ ಇದ್ದಿದ್ದರಿಂದ ಆ Jokesಗಳಿಗೆಲ್ಲಾ ಹೆಚ್ಚಿನ ಅರ್ಥ ಬಂದಿತ್ತು. ಅರೆ, ಹೀಗೆ ಮಾಡುವುದರಿಂದ ಹೆಚ್ಚಿನ ಅರ್ಥ ಕೊಡಬಹುದಲ್ಲಾ ಅಂತ ಅನ್ನಿಸಿತು. ಬಿಡಿ ಬಿಡಿ ಇರುವ ಸಂವೇದನೆಗಳಿಗೆ ಅನುಭವಗಳಿಗೆ ಭಾವನೆಗಳಿಗೆ ಒಂದು ರೂಪ ಕೊಟ್ಟಲ್ಲಿ ಬದುಕಿನ ಅರ್ಥವನ್ನು ಹುಡುಕಬಹುದು. ಬದುಕನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಲೂ ಆಗುತ್ತೆ ಅಂತ

ಯೋಚಿಸಲು ಆರಂಭಿಸಿದೆ. ಬದುಕಿನ ಬಗ್ಗೆ ಒಂದು Vision ಅಥವಾ Illusion ಅಂತ್ಲೇ ಹೇಳಬಹುದು, ಇಟ್ಟುಕೊಳ್ಳಬಹುದು ಅನ್ನಿಸ್ತು. ಬದುಕನ್ನು Absurd ಅಂದುಕೊಂಡರೆ ಈ Absurdity ಬಗೆಗಿನ vision ಈ ತರಹ ಅರ್ಥ ಕೊಟ್ಟು ಕೊಳ್ಳಬಹುದು ಅನ್ನಿಸಿತು...ಇನ್ನು ಇದನ್ನು Publish ಮಾಡೋದು ಏಕೆ ಅಂದ್ರೆ "ಕಾವ್ಯಂ ಯಶಸೇ ಅರ್ಥ ಕೃತೆ..." ಹೀಗೆ ಇವೆಲ್ಲವೂ ಬೇಕು. ಬರೆಯುವುದರ ಮೂಲಕ ನನಗೆ ಒಂದು ಅನುಭವವನ್ನ ಅರ್ಥ ಮಾಡಿಕೊಂಡ ಹಾಗೆ, ಬರವಣಿಗೆಯ ಮೂಲಕ ಓದುಗರಿಗೆ ತಮ್ಮ ಅನುಭವ ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತೆ.

**ಕಾ. ತಾ. ಚಿಕ್ಕಣ್ಣ :** ನಾನು ಬರೆಯೋಕೆ ಶುರುಮಾಡಿದಾಗ ಕಂಡಿತ ನಿರ್ದಿಷ್ಟ ಉದ್ದೇಶವೇನೂ ಇರಲಿಲ್ಲ. ನಾನ್ಯಾಕೆ ಶುರುಮಾಡಿದೆ ಅಂತಲೂ ಲಿಟ್ರಲಿ ಗೊತ್ತಿಲ್ಲ. ಆದ್ರೆ ಅವತ್ತಿನ ಅವಸ್ಥೇನ ಸ್ವಲ್ಪ ಕೆದಕಿ ನೋಡೋದಾದ್ರೆ ಆಗತಾನೆ ಮೈಸೂರಿಗೆ ಬಂದು ಡಿಗ್ರಿಗೆ ಸೇರಿದ್ದೆ. ಕೈಲಿ ಹಣವಿರಲಿಲ್ಲ. ಒಂಥರಾ ಹಿಜಾಪು-ಒತ್ತಡ ಇದು ಒಂದು ಬಗೆಯ ಕಾರಣ. ಇನ್ನೊಂದು ಶಶಿಧರ ಕುಲಕರ್ಣಿ ಅಂತ ನನ್ನ ಸ್ನೇಹಿತನೊಬ್ಬ ಪಿ.ಯು.ಸಿ. ಓತ್ತಿದ್ದ. ಅವನು ಆಗಲೇ ಕಸ್ತೂರಿಯಂಥಾ ಮ್ಯಾಗಜೀನ್‌ನಲ್ಲಿ ತನ್ನ ಕತೆ ಕವನ ಲೇಖನ ಪ್ರಕಟಿಸ್ತಿದ್ದ. ದೊಡ್ಡೋರಿಂದ ಮೆಚ್ಚುಗೆ ಪಡೀತಿದ್ದ. ಅವನು ಸತ್ತೊಗ್ಬಿಟ್ಟ. ಇವೆಲ್ಲಾ ಸೇರಿಕೊಂಡಿರಬೇಕು. ಒಂದು ಬಗೆಯ ಪ್ರಭಾವ ಅನುಕರಣೆ ಕೆಲಸ ಮಾಡಿರಬಹುದು. ಪ್ರಾರಂಭದಲ್ಲಿ ಕವನ ಬರೆಯೋ ಮೂಲಕ ಈ ರಂಗಕ್ಕೆ ಇಳಿದೆ. ಒಂದು ಕತೇನೂ ಬರೆದೆ. ಕಾಲೇಜ್ ಮ್ಯಾಗಜೀನ್‌ನಲ್ಲಿ ಕತೆ ಆಯ್ಕೆಯಾಗಿ ಮೆಚ್ಚುಗೆ ಪಡೆಯಿತು. ಆಯ್ಕೆ ಸಮಿತಿಯಲ್ಲಿದ್ದ ಮೇಡಮ್ ಕರೆದು ಹುರಿದುಂಬಿಸಿದ್ರು. ಹೀಗಾಗಿ ಕಥಾ ಮಾಧ್ಯಮದತ್ತಲೇ ನಾನು ಹೆಜ್ಜೆಯಿಡತೊಡಗಿದೆ.

**ಪ್ರಹ್ಲಾದ್ :** ಕತೆಗೆ ಒಂದು ಸಾಮಾಜಿಕ ಜವಾಬ್ದಾರಿ ಇರುತ್ತೆ ಅನ್ನೋದು ಸುಳ್ಳು ಅಂತೀರಾ ?

**ರಾಘವ :** ಅದೊಂದು Social Activity. ನನ್ನ ಅನುಭವ ಮತ್ತು ಅದನ್ನ ನಾನು ಹೇಳುವ ರೀತಿ ಅದನ್ನ ಇನ್ನೊಬ್ಬ ಓದುವುದು, ಓದಿದ್ದನ್ನ ಅವನು ಯಾವ ರೀತಿ ನೋಡ್ತಾನೆ. ಇದು ಒಂದು ಸಾಮಾಜಿಕ ಚಟುವಟಿಕೆ ಅಷ್ಟೆ. ನೇರವಾಗಿ ಸಾಮಾಜಿಕ ಸಮಸ್ಯೆಯನ್ನೇ ತೆಗೆದುಕೊಂಡು ಕತೆ ಮಾಡ್ತೀನಿ ಅಂದಾಗ ಅದರ ಬಗ್ಗೆ ನನ್ನ ದೊಡ್ಡ Objection ಇದೆ. ಏಕೆಂದರೆ ಸಾಮಾಜಿಕ ಸಮಸ್ಯೆಯೊಂದನ್ನ ಅರ್ಥಮಾಡಿಕೊಳ್ಳೋಕೆ ಕತೆಯನ್ನೇ ಓದಬೇಕಾಗಿಲ್ಲ, Socialogy ಓದಬಹುದು. ಅದರಲ್ಲಿ ಒಂದು ಸಮಸ್ಯೆಯನ್ನ ಹೆಚ್ಚು ವೈಜ್ಞಾನಿಕವಾಗಿ ವಿಶ್ಲೇಷಿಸಲಾಗುತ್ತದೆ. ಸಾಹಿತಿಯೊಬ್ಬ ಸಾಮಾಜಿಕ ಸಮಸ್ಯೆ

ಗಳಿಂದ ಉಂಟಾದ ಸ್ಪಂದನಗಳನ್ನು ಬಳಸಿಕೊಳ್ಳಬಹುದೇ ಹೊರತು ಹಾಗೇ Raw ಆಗಿ ಅದನ್ನು ತೆಗೆದುಕೊಳ್ಳುವುದಲ್ಲ.

**ಪ್ರಹ್ಲಾದ್ :** ಹಾಗಾದರೆ ಬಂಡಾಯ ಸಾಹಿತ್ಯದ ಸೋಲಿಗೆ ಈ ತರಹದ ಕಾರಣ ಇರಬಹುದಾ ?

**ರಾಘವ :** ನಾವು ಒಂದು ಬಂಡಾಯದ ಪದ್ಯ ತೆಗೆದುಕೊಳ್ಳೋಣ. ಇದನ್ನ ಓದುವವರು ಯಾರು ? ನನ್ನಂತಹ–ನಿಮ್ಮಂತವರು ಇದೆಲ್ಲಾ ಗೊತ್ತಿರುವವರೇ. ಕೆಲವರಿಗೆ ಅನ್ಯಾಯ ಆಗ್ತಾ ಇದೆ ಅನ್ನೋದು ವಿದ್ಯಾವಂತ ವರ್ಗಕ್ಕೆ ಗೊತ್ತು. ಈ ಸೂಕ್ಷ್ಮ ಗೊತ್ತಿಲ್ಲದವನು ಅದನ್ನ ಓದುವುದೇ ಇಲ್ಲ. ಯಾಕೆಂದರೆ ಅವನಿಗೆ ಅಕ್ಷರಾಭ್ಯಾಸವೇ ಇಲ್ಲ. ಆದ್ದರಿಂದ ಈ ತರಹ ಬರೆಯುವುದನ್ನೇ ನಾನು Oppose ಮಾಡ್ತೇನೆ.

**ಪ್ರಹ್ಲಾದ್ ;** ನೇಮಿಚಂದ್ರ ಅವರೆ ಬರಹದಿಂದ ಪ್ರಭಾವ ಸಾಧ್ಯವೆ ? ಈ ಬಗ್ಗೆ ನೀವು ಏನು ಹೇಳ್ತೀರಿ.

**ನೇಮಿಚಂದ್ರ :** ಬರಹದಿಂದ ಓದುಗಳಾಗಿ ನಾನು ಪ್ರಭಾವಿತಳಾಗಿದ್ದೇನೆ. ಒಂದು ಸಣ್ಣ ಉದಾಹರಣೆ ಎಂದರೆ, ನನ್ನ ಚಿಕ್ಕ ವಯಸ್ಸಿನಲ್ಲಿ ಮೇರಿ ಕ್ಯೂರಿಯ ಬಗ್ಗೆ ನನಗೊಂದು ಪುಸ್ತಕ ನನ್ನ ತಂದೆಯವರ ಸಂಗ್ರಹದಲ್ಲಿ ಸಿಕ್ಕಿತ್ತು. ಆ ವಯಸ್ಸಿನಲ್ಲಿ ಅದರ ಓದು ನನ್ನ ಮೇಲೆ ಎಲ್ಲಿಲ್ಲದ ಪ್ರಭಾವ ಬೀರಿದ ನೆನಪಿದೆ. ಸಣ್ಣ ಪಟ್ಟಣದ ಸಾಮಾನ್ಯ ಹಿನ್ನೆಲೆಯಿಂದ ಬಂದವಳು ನಾನು. ನಾ ವಿಜ್ಞಾನ ತಂತ್ರಜ್ಞಾನವನ್ನು ಆಯ್ದುಕೊಳ್ಳುವ ಹಿನ್ನೆಲೆಯಲ್ಲಿ ಅತಿ ಸೂಕ್ಷ್ಮವಾಗಿ, ಸುಪ್ತ ಪ್ರಜ್ಞೆಯಲ್ಲೆಲ್ಲೋ ಇಂಥಾ ಪುಸ್ತಕಗಳು ಪ್ರೇರೇಪಿಸಿದ್ದವು. ಹಾಗೆಂದೇ ಬರಹದಿಂದ ಒಂದಿಷ್ಟು ಪ್ರಭಾವ ಖಂಡಿತಾ ಸಾಧ್ಯ ಎಂದು ಹೇಳಬಲ್ಲೆ ಅಂಥಾ ಹುಂಬತನದಲ್ಲೇ ನಾನಿನ್ನೂ ಬರೀತಾ ಇದ್ದೀನಿ ಅಂತಲೂ ಹೇಳಬಲ್ಲೆ. ಇತ್ತೀಚೆಗೆ ಬರೆದ ಅದೇ ಮೇರಿ ಕ್ಯೂರಿಯ ಜೀವನ ಚರಿತ್ರೆಯ ಬಗ್ಗೆ ಹೇಳುವುದಾದರೆ ನಾ ಧಾರಾವಾಹಿ ಬರೆದಿರಲಿಲ್ಲ, ಆದರೆ ಬರೆದದ್ದು ಧಾರಾವಾಹಿಯಾಯಿತು. ಇದನ್ನು ಯಾರಾದರೂ ಓದುತ್ತಾರೆಯೇ ಎನ್ನೋ ಅನುಮಾನ ನನಗೇ ಇತ್ತು. ಆದರೆ ಯಾವುದೋ ಮೂಲೆಯಿಂದ ಯಾವುದೋ ಹಳ್ಳಿಯಿಂದ ಬಂದ ಪತ್ರಗಳ ಪ್ರತಿಕ್ರಿಯೆ ಕಂಡಾಗ ಎಷ್ಟೇ ಸಣ್ಣದಾದರೂ ಈ ಬರಹದ ಪ್ರಭಾವ ಇದೆ ಅನಿಸಿತು. ಅಂಥಾ ಪ್ರಭಾವಕ್ಕೂ ಮಿತಿ ಇರಬಹುದು. ಆ ಮಿತಿಯಲ್ಲೂ ಬರಹ ಪ್ರಭಾವ ಬೀರುತ್ತೆ. ನಾ ಓದುಗಳಾಗಿ ಬಹಳಷ್ಟು ಪುಸ್ತಕಗಳಿಂದ ಸ್ಫೂರ್ತಿ ಪಡೆದಿದ್ದೇನೆ. ಅಂಥಾ ಪ್ರಭಾವದ ನಂಬಿಕೆಯಲ್ಲಿ ಬರೆಯುತ್ತೇನೆ. ನನ್ನ ಅನಿಸಿಕೆ ಗಳನ್ನು ತಲುಪಿಸುವ ಆಶಯದಲ್ಲಿ ಬರೆಯುತ್ತೇನೆ.

**ಕಾ. ತಾ. ಚಿಕ್ಕಣ್ಣ :** ನನ್ನ ಅಭಿಪ್ರಾಯ ಭಿನ್ನವಾಗಿದೆ. ನಾನು ಪಕ್ಕಾ ಹಳ್ಳಿಯೋನು, ಹೆಚ್ಚು ಗೊತ್ತಿರೋದು ಅವೇ ನನಗೆ. ಇವು ಹಳ್ಳಿಯಿಂದ ಬಂದವರಿಗೂ ಗೊತ್ತಿರುತ್ತದೆ. ಆದರೆ ಆ ಗೊತ್ತಿರೋವನ್ನ ನಾನು ಹೆಂಗೆ ಹೇಳ್ತೀನಿ ಅನ್ನೋದು ಕತೆಯಾಗುತ್ತೆ. ನೋಡಿ ನಾನು ಮೊದಲೇ ಹೇಳಿದಂಗೆ ಕೇವಲ ಕುತೂಹಲಕ್ಕಾಗಿ ನಾನು ಬರೆಯಲು ಶುರು ಮಾಡಿದರೂ ಈಗ ಬರೀ ಕುತೂಹಲಕ್ಕಾಗೆ ಬರೀತಿದ್ದೀನಿ ಅಂತ ಹೇಳಕ್ಕಾಗಲ್ಲ. ಒಂದು ನಿದರ್ಶನ ಹೇಳ್ತೀನಿ : ಬಸವ ಕಲ್ಯಾಣದಲ್ಲಿ ವಚನ ಸಂಗೀತೋತ್ಸವ ಅಂತ ಮೂರು ದಿನಗಳ ದೊಡ್ಡ ಕಾರ್ಯಕ್ರಮ ನಡೀತು. ಅಲ್ಲಿ ವೇದಿಕೆ ಇತ್ಯಾದಿ ಸ್ವಚ್ಛಗೊಳಿಸಲು ಕೆಲಸಗಾರ್ರು ಬೇಕಾಗಿತ್ತು. ಆ ಕೆಲಸಕ್ಕೆ ಒಬ್ಬ ವ್ಯಕ್ತಿ ಸಿಕ್ಕಿದ. ಆತ ಕಪ್ಪನೆಯ ಧಡೂತಿ ಆಸಾಮಿ. ಆ ಮುಖದಲ್ಲಿ ಒಂದು ಥರಾ ನಗು. ಅವನಲ್ಲಿ ತುಂಟತನ ಸರಸತನ ಕಾಣದಂತೆಯೇ ತಾಂಡವವಾಡುತ್ತಿತ್ತು. ಅವನನ್ನ ನೋಡಿದರೆ ಬೇಸರವಿದ್ದರೂ ಖುಷಿಯಾಗಬೇಕು. ಅಂಥಾ ವ್ಯಕ್ತಿತ್ವ ಅವನದ್ದು. ಅವನ ಫ್ಯಾಮಿಲಿ ಅಂದ್ರೆ ಅವನು, ಆತನ ಹೆಂಡ್ತಿ, ಒಂದು ಪುಟ್ಟ ಮಗು ಬೀದರ್ ಕಡೆಯಿಂದ ಬಂದವರು. ಮೈ ಕಿತ್ತು ತಿನ್ನೋ ಬಡತನ, ಆದ್ರೆ ಅದು ಅವನ ಕ್ರಿಯೆಟಿವಿಟಿಯನ್ನು ಕೊಂದೇ ಇರಲಿಲ್ಲ. ಹೇಳಿದ ಕೆಲಸವ ಎಷ್ಟು ನಿಷ್ಠೆಯಿಂದ ಕುತೂಹಲದಿಂದ ಮಾಡ್ತಾ ಇದ್ದ ಅಂದರೆ ಆಶ್ಚರ್ಯವಾಗುತ್ತಿತ್ತು. ನಾನು ಬೆಂಗಳೂರಿಗೆ ಬಂದಮೇಲೆ ಆತನ ಕತೆ ಮಾಡಬಹುದಾ ? ಅನ್ನಿಸಿತು. ಯಾಕೋ ಆಗಲಿಲ್ಲ ಆಮೇಲೆ ಎರಡು ವರ್ಷದ ಮೇಲೆ 'ಹಮಿೂದಾಯಣ' ಅಂತ ಒಂದು ಕಥೆ ಕೇವಲ ಅರ್ಧ ಗಂಟೆಯೊಳಗೆ ರೂಪುತಾಳಿಬಿಟ್ಟಿತು. ಸುಧಾ ವಿಶೇಷಾಂಕದಲ್ಲಿ ಜಿ. ಎಸ್. ಅಮೂರ ಅವರು ದಶಕದ ಹತ್ತು ಉತ್ತಮ ಕಥೆಗಳಲ್ಲಿ ಇದೊಂದು ಅಂತ ಗುರುತಿಸಿದ್ದಾರೆ.

ಅಂದ್ರೆ ನನ್ನ ಮಾತಿನ ಅರ್ಥ ಒಂದು ಕತೆಗೆ ನೀವು ಕೇಳಿದಂಗೆ ಸೋಷಿಯಲ್ ರೆಸ್ಪಾನ್ಸಿಬಿಲಿಟಿ ಇರಬೇಕು ಅಂತ ನಿರ್ಬಂಧ ಬಯಸೋದು ಎಷ್ಟು ಸರಿಯೋ ಚರ್ಚಿಸಬಹುದು. ಆದರೆ ಆ ಬಗ್ಗೆ ಕಾಳಜಿ ಇರೋ ಕಥೆಗಾರನಲ್ಲಿ ತಂತಾನೇ ಆ ಕೆಲಸ ನಡೆಯುತ್ತೆ. ಶ್ರೀ ರಾಘವ ಅವರು ಬಂಡಾಯ ಸಾಹಿತ್ಯದ ಬಗ್ಗೆ ಹೇಳಿದರು. ದೇವನೂರು ಮಹಾದೇವರ ಆ ಕಥೆಗಳು ನಮಗೆ ಯಾಕೆ ಪ್ರಿಯ ಆಗ್ತವೆ, ಮನಸ್ಸಿಗೆ ತಾಕುತ್ತವೆ ಅಂತ ಯೋಚಿಸಬೇಕು.

**ನೇಮಿಚಂದ್ರ :** ಅದು ಕೇವಲ ಘಟನೆಗಳ ವರದಿಯಾಗಿದ್ದರೆ ಅಷ್ಟು ತಾಕುತ್ತಿರಲಿಲ್ಲ.

**ಕಾ. ತಾ. ಚಿಕ್ಕಣ್ಣ :** ಬಂಡಾಯ ಸಾಹಿತ್ಯದ ಬಗ್ಗೆ ತೀರ್ಮಾನ ಕೊಡೋದು ಬೇಡ ಅನ್ನೋನು ನಾನು. ಕಾಲ ಅನ್ನೋದಿದೆ. 12ನೇ ಶತಮಾನದ ವಚನ

ಸಾಹಿತ್ಯಕ್ಕೆ ಯಾರೂ ಅದೇ ಶತಮಾನದಲ್ಲಿ ಅಥವಾ ಮುಂದಿನ ಶತಮಾನದಲ್ಲಿ ನಿರ್ಣಯ ಕೊಡಲಿಲ್ಲ. ಅದನ್ನು ಕಾಲವೇ ಅಳೆಯುತ್ತೆ.

ಸಾಮಾಜಿಕ ಸಮಸ್ಯೆಯೊಂದನ್ನ ಸಮಾಜಶಾಸ್ತ್ರ ವರದಿ ಮಾಡಬೇಕಿಲ್ಲ. ಯಾವುದೇ ಕ್ರಿಯೇಟಿವ್ ಫಾರಮ್ಮಿನಲ್ಲಿ ಅದು ಇನ್ನೂ ಪರಿಣಾಮಕಾರಿಯಾಗಿ ಅಭಿವ್ಯಕ್ತಿಯಾಗಬಹುದು. ಆ ವರದಿಗಿಂತಲೂ ಇದೇ ಓದೋರಿಗೆ ಮುಟ್ಟುತ್ತೆ. ನನ್ನದೇ ಒಂದು ಚಿಕ್ಕ ಉದಾಹರಣೆ ಕೊಟ್ಟು ಈ ಮಾತು ಮುಗಿಸ್ತೇನೆ: ನಾನು ಚಿಕ್ಕವನಾಗಿದ್ದಾಗ ನಮ್ಮೂರಲ್ಲಿ ಕಸ್ತೂರಿ ಅಂತ ಒಬ್ಬ ಕುಂಬಾರ ಇದ್ದ. ರಾತ್ರಿ ಹೊತ್ತು ಅವನು ಹಾಡ್ತಾ ಇದ್ದದ್ದು ಈಗಲೂ ನನ್ನ ಮನಸ್ಸಿನ ಮೇಲೆ ನೆಲೆಯಾಗಿ ನಿಂತಿದೆ. ಆ ಕಸ್ತೂರಿಯ ಕಾದಂಬರಿ ಮಾಡಬೇಕು ಅಂತ ಪ್ರಯತ್ನ ಮಾಡಿದೆ. ಒಮ್ಮೆ 80 ಪುಟದವರೆಗೂ ಬರೆದು ರಿಪೋರ್ಟ್ ಅನ್ನಿಸಿ ಹರಿದು ಹಾಕಿಬಿಟ್ಟೆ. ಅದಾದ ಹನ್ನೆರಡು ವರ್ಷಗಳ ಮೇಲೆ 'ಮುಂಜಾವು' ಬರೆಯಲು ಸಾಧ್ಯವಾಯ್ತು. ಕುಂಬಾರಿಕೆ ವೃತ್ತಿ–ಬಡತನ ಇವೇ ಮುಖ್ಯ ಆಗೋದಿಲ್ಲ. ಹಾಗಂತ ಹಳ್ಳೀತನ ಮೈಗೂಡಿಸಿಕೊಂಡಿರೋ ನನ್ನಂಥವನಿಗೆ ಇವು ಮುಖ್ಯವೂ ಅಲ್ಲ. ಕೊನೆಗೆ ನಿಲ್ಲೋದು ಬೇಕು ಬೇಡ ಅಲ್ಲ. ಇವುನ್ನ ನಾನು ಹೆಂಗೆ ಹೇಳ್ತಿದ್ದೀನಿ ಅನ್ನೋದು...

**ಎಲ್. ಎನ್. ಮುಕಂದರಾಜ್ :** ಬಂಡಾಯದ ಬಗ್ಗೆ ಒಂದು ಮಾತು, ಎಲ್ಲರಿಗೂ ಎಲ್ಲವೂ ಗೊತ್ತಿರೋದೇ ಆಗಿದೆ. ಯಾವುದರಲ್ಲೂ ಅಗಾಧವಾದ ಹೊಸತನ ಇದೆ ಅನ್ನಿಸೋಲ್ಲ ಹೊಸತನ Formನಲ್ಲಿ ಇರುತ್ತದೆಯೇ ಹೊರತು Subjectನಲ್ಲಿ ಅಲ್ಲ. ಕುಂಬಾರರ ಬಗ್ಗೆ ಚಿಕ್ಕಣ್ಣ "ಮುಂಜಾವು" ಬರೆದದ್ದು ; ನನಗೇನು ಕುಂಬಾರರ ಬಗ್ಗೆ ಗೊತ್ತಿಲ್ಲವೆ ? ಅವರು ಹೇಳುತ್ತಿರುವ ಕ್ರಮದಲ್ಲಿ ನನಗೆ ಹೊಸತನ ಕಾಣಿಸುತ್ತದೆ ಅದಕ್ಕೇ ಇನ್ನು ತಿಳಿಯಬೇಕೆಂಬ ಕಾತುರ ನನಗೆ. ಬಂಡಾಯದವರು ಹೇಳುವ ಕ್ರಮದಲ್ಲಿ ತಪ್ಪಿದ್ದಾರೆ ಹೊರತು ಆ Subject ಅನ್ನು ಅಷ್ಟು ಸುಲಭವಾಗಿ ನಾವು ತಳ್ಳಿಹಾಕುವಂತಿಲ್ಲ.

**ಎಲ್ಸಿ. ನಾಗರಾಜ್ :** ಬಂಡಾಯದಲ್ಲಿರೋ ಸಮಸ್ಯೆ ಏನು ಅಂದರೆ ಎಲ್ಲವನ್ನು Black and White ಆಗಿ ಹೇಳಿದೆ. ಒಬ್ಬ ಜಮೀನ್ದಾರ ಮತ್ತೊಬ್ಬ ಬಡವನ ಹೆಂಡತೀನ ರೇಪ್ ಮಾಡಿದ ಇತ್ಯಾದಿ. ಮಹಾದೇವರ ಒಂದು ಕತೆಯನ್ನ ಬಂಡಾಯದ ಇತರರ ಕತೆಯ ಜೊತೆಗಿಟ್ಟು ನೋಡಿ. ಅದು ಹೇಳುವ ಕ್ರಮ, ಅಂದರೆ Perception ಬಗ್ಗೇನೇ ನನಗೆ ಸಂದೇಹ ಇದೆ. ಗ್ರಹಿಸುವ ಮಟ್ಟದಲ್ಲಿ ಸೋತಿದಾರೆ ಅನ್ನಿಸುತ್ತೆ.

**ರಾಘವ :** ಈ Black and Whiteನಲ್ಲಿ ಬರೆಯೋದಿದೆಯಲ್ಲ ಅದು ಪ್ರಗತಿಶೀಲರ ಕಾಲದಿಂದಲೂ ಇರೋದು. ನೇರವಾಗಿ ಇವರು ಕೆಟ್ಟವರು ಇವರು

ಒಳ್ಳೆಯವರು ಅಂತ Simplify ಮಾಡೋದು. ಒಬ್ಬ ಲೇಖಕ ಯಾವಾಗ ಉತ್ತಮವಾದದ್ದನ್ನು ಬರೆಯುತ್ತಾನೋ ಆಗ ಬಂಡಾಯವನ್ನೂ ಅವನು ಮೀರಿ ಹೋಗ್ತಾನೆ. ದೇವನೂರು ಮಹಾದೇವಾನೇ ಇದಕ್ಕೆ ಒಳ್ಳೆಯ ಉದಾಹರಣೆ. ಬರೀ ಪ್ರಣಾಳಿಕೆಯಲ್ಲಿಡದೆ ಅನುಭವದ ಜೊತೆಗೆ Struggle ಮಾಡುವುದ ರಿಂದ ನಿಜವಾದ ಲೇಖಕ ಆಗೋಕೆ ಸಾಧ್ಯ. ಗೋವಿನ ಕತೆಯು ನನಗೂ ನಿಮಗೂ ಶಾಲೆಯ ದಿನಗಳಲ್ಲೇ ಆಪ್ಯಾಯಮಾನವಾಗಿತ್ತು, ಇಷ್ಟವಾಗಿತು. ನಾನೂ ಬೆಳೀತಾಹೋದೆ ನಂತರ Reject ಮಾಡಿದೆ ಇದು ತುಂಬಾ ಮುಖ್ಯ ನಾವು ಬೆಳೀತಾ ಹೋದ ಹಾಗೆ ಓದು ಅನುಭವ ಹೆಚ್ಚಾಗ್ತಾ ಹೋದಹಾಗೆ ಕೆಲವನ್ನ Reject ಮಾಡ್ತಾ ಹೋಗ್ತೇವೆ. ಆದ್ದರಿಂದ ಬಹಳಷ್ಟನ್ನ ನಾವು ಓದುವುದಕ್ಕೆ ಆಗುವುದಿಲ್ಲ. ಹೀಗೇ ಒಂದೊಂದು Reject ಆಗ್ತಾನೇ ಹೋಗಿ ಕೊನೆಗೆ ಉಳಿಯುವುದು ಒಬ್ಬನೇ ಲೇಖಕ. ಆ ಲೇಖಕನೂ ಹೊರಟು ಹೋಗ್ತಾನೆ. ಅದನ್ನೇ ಷೇಕ್ಸ್ಪಿಯರ್ ಬಹಳ ಚೆನ್ನಾಗಿ ಹೇಳ್ತಾನೆ "Beyond the words music" ಅಂತ. ಬೇಂದ್ರೆ ಅದನ್ನು ಪ್ರಯತ್ನಪಟ್ಟರು. ನೋಡಿ ಶಬ್ದಗಳು Communicate ಮಾಡುವುದಕ್ಕೆ ಒಂದು ಮಿತಿ ಇದೆ. Words ಎಲ್ಲಿ fail ಆಗುತ್ತೋ ಅಲ್ಲಿ music ಇರುತ್ತೆ. music ಅನ್ನೂ ಮೀರಿದ್ದು ಇದೆ ಅದು Silence. ಕೊನೆಗೆ ಆ Stateಗೇ ಹೋಗಬೇಕು. ಅದನ್ನೇ ನಮ್ಮ ಕಾವ್ಯಮೀಮಾಂಸಕರು ಹೇಳಿದ್ದು 'ನಾನ್ಯಯಷಃ ಕುರುತೇ ಕಾವ್ಯಂ' ಅಂತ. ಇಡೀ ಪ್ರಕ್ರಿಯೆ ಇರೋದೇ ಹಾಗೆ ನಾವು Reject ಮಾಡುತ್ತಲೇ ಹೋಗಬೇಕು.

**ಶ್ರೀಧರ ಮೂರ್ತಿ :** ಹಾಗಾದರೆ ನಮ್ಮ ಅನುಭವವನ್ನು ಸೊಫೆಸ್ಟಿಕೇಟೆಡ್ ಮಿಡಿಯಾದಲ್ಲಿ ಏಕೆ ಇಡಲು ಪ್ರಯತ್ನಿಸ್ತೇವೆ ?

**ರಾಘವ :** ಒಬ್ಬ ಲೇಖಕ ಭಾಷೆಯನ್ನ Explore ಮಾಡ್ತಾಹೋಗ್ತಾನೆ. ಎಲ್ಲವನ್ನೂ ಬ್ರೇಕ್ ಮಾಡ್ತಾಹೋಗ್ತಾನೆ. ಅವನು ಏನು ಹೇಳ್ತಾನೆ ಅನ್ನೋದು ಈವರೆಗೆ ಯಾರೂ ಹೇಳಿರದಿರುವುದು, ಹೇಳಲಿಕ್ಕೆ ಆಗದಿರುವುದು. ಭಾಷೆ ಮತ್ತು ಅನುಭವ ಎರಡರ Exploration ಒಟ್ಟಿಗೆ ನಡೆಯುತ್ತಾ ಹೋಗತ್ತೆ ಭಾಷೆಯನ್ನ ಲೇಖಕ Create ಮಾಡ್ಕೋಬೇಕು. ಹೀಗೆ ಮಾಡಿಕೊಂಡಾಗಲೇ ಅವನಿಗೆ ಹೇಳಬೇಕಾದ್ದು ಹೇಳಲು ಸಾಧ್ಯವಾಗುವುದು.

**ಶ್ರೀಧರ ಮೂರ್ತಿ :** ಕನ್ನಡ ವಿಮರ್ಶೆಯ ಸಂದರ್ಭದಲ್ಲಿ ಎರವಲು ತೆಗೆದುಕೊಂಡ ಶಿಸ್ತುಗಳ ಸಮಸ್ಯೆ ಇದೆಯಲ್ಲವೆ ?

**ರಾಘವ :** ವಿಮರ್ಶಕ ಓದುಗನಿಗೆ ಮತ್ತು ಲೇಖಕನಿಗೂ ಒಂದು ಸೇತುವೆ ಆಗ್ತಾನೆ. ಅವನು ಕೊಡುವ ನಿರ್ಣಯಗಳನ್ನು ಒಪ್ಪಿಕೊಳ್ಳದಿರುವ ಅಧಿಕಾರ ಓದುಗನಿಗೂ

ಇರುತ್ತೆ. ಲೇಖಕನಿಗೂ ಇರುತ್ತೆ. ಕನ್ನಡದ ಸಂದರ್ಭದಲ್ಲಿ ದುರಂತ ಏನು ಅಂದ್ರೆ, ವಿಮರ್ಶಕನ ನಿರ್ಣಯವೇ ಅಂತಿಮ ಆಗ್ತಾ ಇದೆ. ಭಾಷೆಯನ್ನ ಒಬ್ಬ ವಿಮರ್ಶಕ ಹೇಗೆ ಉಪಯೋಗಿಸ್ತಾನೆ ಅಂದ್ರೆ ಕೆಲವು ಸಲ ನಮಗೆ ಅಂದ್ರೆ ಲೇಖಕರಿಗೇ ಅರ್ಥವಾಗಲ್ಲ, ಓದುಗರಿಗಂತೂ ಅರ್ಥವೇ ಆಗುವುದಿಲ್ಲ. ನಮ್ಮ ಕೆಲವು ವಿಮರ್ಶಕರು ಇದನ್ನ Deliberate ಆಗಿ ಮಾಡ್ತಾ ಇದ್ದಾರೆ. ಇದು ಓದುಗನನ್ನೇ ಗಾಭರಿ ಮಾಡ್ತ ಇದೆ. ಅವನು ತನ್ನ ಅಭಿರುಚಿಯನ್ನೇ ಅನುಮಾನ ದಿಂದ ನೋಡುವ ಹಾಗೆ ಆಗ್ತಾ ಇದೆ. ಇದು ಯಾವ ಮಟ್ಟಕ್ಕೆ ಹೋಗುತ್ತೆ ಅಂದ್ರೆ ಈಗ ಒಬ್ಬ ಲೇಖಕ ಮತ್ತೊಬ್ಬ ವಿಮರ್ಶಕನನ್ನ ಆಮಿಷಗಳನ್ನು ಒಡ್ಡಿ ಕೊಂಡುಕೊಂಡುಬಿಟ್ಟ ಅಂತ ಇಟ್ಟುಕೊಳ್ಳಿ, ನಮ್ಮ ಕನ್ನಡದಲ್ಲಿ ಒಬ್ಬ ಲೇಖಕರು ಅದನ್ನು ಮಾಡಿದ್ರು, ಅವರು Advertising Agencyಯನ್ನ ಉಪಯೋಗಿಸಿಕೊಂಡಿದ್ರು. ವಿಮರ್ಶಕನನ್ನೂ ಹಾಗೇ ಮಾಡಿದಾಗ ಅವನು ಸಾಹಿತ್ಯಕ್ಕೆ ಎಂತಹ Damage ಮಾಡಬಹುದು. ತಾನು ತುಂಬಾ Selective ಅಂತ ಹೋಗಿ ಯಾವುದನ್ನೂ Select ಮಾಡದೆ ತಾನು ಮತ್ತು ತನ್ನ ಆಶ್ರಯದಾತ ಮೇಲೇರುವುದನ್ನ ನೋಡಿಕೊಳ್ಳುವ ವಿಮರ್ಶಕರೂ ಇದ್ದಾರೆ. ವಿಮರ್ಶಕ ಒಬ್ಬ ಗಂಭೀರ ಓದುಗ ಆದದ್ದರಿಂದ ಸಾಮಾನ್ಯ ಓದುಗರಿಗೆ ಹೊಳೆಯದ ಅರ್ಥಗಳು ಅವನಿಗೆ ಸಿಕ್ಕುತ್ತವೆ. ವಿಮರ್ಶಕ ಅಂದ್ರೆ ಎರಡು ಕೆಲಸ ಮಾಡಬೇಕು. ಒಂದು ಕೃತಿಯನ್ನ ವಿವರಿಸುವುದು ಇನ್ನೊಂದು ಹೋಲಿಸುವುದು, ಇದೆರಡೇ ಕೆಲಸ ಅವನು ಮಾಡಬೇಕಾಗಿರುವುದು. ಅವನ ನಿರ್ಣಯ ತಪ್ಪಿರ ಬಹುದು ಅದು ಅವನ ಜನಾಂಗಕ್ಕೆ ಮುಖ್ಯವಾಗುತ್ತೆ. ಸರಿ ಅನ್ನಿಸದ ಉತ್ತಮ ಜನಾಂಗ ಅದನ್ನು ಸೀರಿಯಸ್ ಆಗಿ ತೆಗೆದುಕೊಳ್ಳಬೇಕಿಲ್ಲ. ಸರಿ ಅನಿಸಿದ್ದನ್ನ ಸೀರಿಯಸ್ಸಾಗಿ ತೆಗೆದುಕೊಂಡ ಲೇಖಕ ಬರೆಯುವುದನ್ನು ನಿಲ್ಲಿಸುತ್ತಾನೆ ಓದುಗ ಓದುವುದನ್ನು ನಿಲ್ಲಿಸುತ್ತಾನೆ.

**ಶ್ರೀಧರ ಮೂರ್ತಿ :** ನೇಮಿಚಂದ್ರ ಅವರೆ, ನಿಮ್ಮ ಮೊದಲ ಸಂಕಲನ 'ನಮ್ಮ ಕನಸುಗಳಲ್ಲಿ ನೀವಿದ್ದೀರಿ'ಯಲ್ಲಿ ಹೊಸ ತಂತ್ರಗಾರಿಕೆ—ಪ್ರಯೋಗಗಳಿದ್ದವು. ಕವಿತೆ ಪ್ರಬಂಧದ ಗುಣಗಳನ್ನು ಕಥೆಯ Formಗೆ ಬಳಸುವ ಪ್ರಯತ್ನ ಇತ್ತು. ಆದರೆ ಎರಡನೇ ಸಂಕಲನದಲ್ಲಿ ಸರಳವಾಗಿ ಕತೆ ಹೇಳುವ ಕಡೆ ನಿಮ್ಮ ನಿಲುವು ಇದೆ. ಎಷ್ಟು ಸರಳ ಎಂದರೆ "ಏನೊಂದು ಆಗದವರು" ಶೀರ್ಷಿಕೆಯೇ ಅರ್ಧ ಕತೆ ಹೇಳುತ್ತೆ. ಈ ವ್ಯತ್ಯಯಕ್ಕೆ ಕಾರಣ ಏನಿರಬಹುದು ?

**ನೇಮಿಚಂದ್ರ :** ನಮ್ಮ ಕನಸುಗಳಲ್ಲಿ ನೀವಿದ್ದೀರಿ. ಬರೆಯುವ ಸಂದರ್ಭದಲ್ಲಿ ಹೊಸ ತಂತ್ರ ಬಳಸುತ್ತಿದ್ದೇನೆ ಅಂತೇನೂ ನನಗೆ ಗೊತ್ತಿರಲಿಲ್ಲ. ಆ ಕತೆಗೆ ಕವನದ ಕಂಪಿತ್ತು. ಕವನ ಬರೆಯುತ್ತಲೇ ಬರಹ ಆರಂಭಿಸಿದವಳು ನಾನು. ಅದರ

ತುಣುಕುಗಳು ಕತೆಯಲ್ಲಿ ಹರಿದುಬಂದಿತು. ತಂತ್ರದ ಬಗ್ಗೆ ನಾನು ಹೆಚ್ಚು ತಲೆ ಕೆಡಿಸಿಕೊಂಡವಳಲ್ಲ. ಪಠ್ಯವಾಗಿ ಸಾಹಿತ್ಯ ವಸ್ತು ತಂತ್ರಗಳನ್ನು ಕುರಿತು ಓದಿದವಳೂ ಅಲ್ಲ. ಇತ್ತೀಚೆಗೆ ಅನೇಕರು ಸರಳವಾಗಿ ಕತೆ ಹೇಳ್ತೀರಿ, Indirect ಆಗಿ ಒಂದೇ ತಂತ್ರ ಬಳಸ್ತೀರಿ ಅನ್ನೋಕೆ ಶುರುಮಾಡಿದಾಗ, ಹೌದೆ ಎಂದು ಯೋಚಿಸುವಂತಾಯಿತು. ನನ್ನಲ್ಲಿ ಕತೆಗಾಗಿ ತಂತ್ರ ಹುಟ್ಟಿ ಕೊಳ್ಳುತ್ತದೆ, ತಂತ್ರಕ್ಕಾಗಿ ಕತೆಯಲ್ಲ.

**ಶ್ರೀಧರ ಮೂರ್ತಿ :** ಈ ಪ್ರಶ್ನೆ ನಿಮ್ಮ ಎರಡನೇ ಸಂಕಲನದ ಸಂದರ್ಭದಲ್ಲಿ ಬಂದದ್ದು ಹೇಗೆ ?

**ನೇಮಿಚಂದ್ರ :** 'ಮತ್ತೆ ಬರೆದ ಕವನಗಳು' ಕತೆಯಲ್ಲಿ ಹೊಸಬಗೆಯ ತಂತ್ರ ಬಳಸಿದ್ದೀರಿ ಅನ್ನುವವರಿದ್ದಾರೆ. ಆದರೆ ನಾನು ಪ್ರಜ್ಞಾಪೂರ್ವಕವಾಗಿ ಹೊಸ ತಂತ್ರವನ್ನು ಉಪಯೋಗಿಸಲು ಯತ್ನಿಸಿದ್ದಲ್ಲ. ಆ ಕತೆಗೆ ಆ ತಂತ್ರದ ಅಗತ್ಯವಿತ್ತು. ಭೂತ, ವರ್ತಮಾನವನ್ನು ಒಟ್ಟಿಗೆ ಹೇಳುವ ಕಥಾತಂತ್ರ. ಕಾಶ್ಮೀರ ದಲ್ಲಿ ಅವರಿಬ್ಬರ ಭೇಟಿ ಕಣಿವೆಗಿಳಿಯುವ ಚಿಂತನೆಗಳು. ಅಲ್ಲಿ ಮಧ್ಯೆ ಮಧ್ಯೆ ಹಾಯ್ದು ಬರುವ ಬಾಲ್ಯದ ನೆನಪುಗಳು, ವರ್ತಮಾನದಲ್ಲಿ ತಟ್ಟನೆ ನುಗ್ಗಿ ಮರೆಯಾಗುತ್ತದೆ, Flashes ತರಹ. ಆ ಗತವನ್ನು, ವರ್ತಮಾನವನ್ನು ಬೇರೆ ಇಡಲು ಬರುತ್ತಿರಲಿಲ್ಲ. ಕತೆಯ ಭಾಗವಾಗಬೇಕಾದ ಅನಿವಾರ್ಯದಲ್ಲಿ ಹುಟ್ಟಿಕೊಂಡ ತಂತ್ರ ಅದು. ಬೇರೆ ಕತೆಗಳಲ್ಲಿ ನನಗೆ ಆ ಸಮಸ್ಯೆ ಬರಲಿಲ್ಲ. ನೇರವಾದ ಕಥಾವಸ್ತು ಸರಳ ತಂತ್ರದಲ್ಲಿಯೇ ಬರೆಯಲು ಸಾಧ್ಯವಿತ್ತು. ಬಹುಶಃ ವಸ್ತುವಿನ ಸಂಕೀರ್ಣತೆಯ ಮೇಲೆ ತಂತ್ರಗಾರಿಕೆ ನಿರ್ಧಾರಿತವಾಗುತ್ತೆ ಅನ್ನಿಸುತ್ತೆ.

**ಪ್ರಹ್ಲಾದ್ :** ರಾಘವ ಅವರ ಕತೆಗಳಲ್ಲೂ ಈ ರೀತಿಯ ಬದಲಾವಣೆ ಗುರುತಿಸ ಬಹುದು, ನಿಮ್ಮ ಪ್ರಾರಂಭದ ಕತೆಗಳು ಕವಿತೆಯಷ್ಟು ತೀವ್ರವಾಗಿದ್ದು ಇತ್ತೀಚಿನ ಕತೆಗಳನ್ನ ನೀವು Conscious ಆಗಿ ಬರೆದಿದ್ದೀರಿ ಅನ್ನಿಸುತ್ತೆ.

**ರಾಘವ :** ಮೊದಲು ಅನುಭವ ಯಾವತ್ತೂ ಕತೆಯಲ್ಲಿ ಮುಖ್ಯವಾಗುತ್ತೆ. ಕತೆಗಳಲ್ಲಿ ಮುಂದೇನು ಮುಂದೇನು ಎನ್ನುವ ಕುತೂಹಲ ಇರುತ್ತಲ್ಲ. ಅದಕ್ಕೆ ವಿರುದ್ಧ ವಾಗಿ ಅನುಭವದ ಪದರಗಳನ್ನು ಬಿಡಿಸುತ್ತಾ ಹೋಗುತ್ತೇನೆ. ನನಗೆ ಕತೆಯೆಂದರೆ "ಮುಂದೇನು ?" ಮುಖ್ಯ ಅಲ್ಲ, ವಿಕೃತಿಯಂಥಾ ಕಾದಂಬರಿಯಲ್ಲಿ ಏನಾಗಿದೆ ಅಂದ್ರೆ ಕತೆಯೇ ಇಲ್ಲ ಘಟನೆಗಳು, ಅನುಭವಗಳು, ಯೋಚನೆಗಳು ಇತ್ಯಾದಿ ಇದೆ. ಕತೆ ಅನ್ನೋದು ಇಲ್ಲ ಮುಂದೇನು ? ಅನ್ನೋದೇ ಬರೋದಿಲ್ಲ. ಇದನ್ನು ಏಕೆ ಹೀಗೆ ಮಾಡಿದೆ ಅಂದ್ರೆ ಮುಂದೇನು ? ಅಂತ ಹೋದಾಗ ನಾವು ಬಹಳಷ್ಟು ಮಿಸ್ ಮಾಡಿಕೊಳ್ತೇವೆ. ಮುಂದೇನಾಗತ್ತೆ ಅನ್ನೋದು ಗೊತ್ತಾ

ದಾಗ Structure ಬಗ್ಗೆ ತಲೆಕೆಡಿಸಿಕೊಳ್ಳದೆ ಅನುಭವದ ವಿವಿಧ ಪದರಗಳನ್ನು ಆಳವನ್ನು ಕೊಡೋದು ಸಾಧ್ಯವಾ ? ಸಾಧ್ಯವಾದರೆ ಅದು ಓದುಗನಿಗೆ ರಂಜಕವಾಗಬೇಕು.

**ಪ್ರಹ್ಲಾದ್ :** ನವ್ಯದ ವಾತಾವರಣದಲ್ಲಿ ನೀವು ಬರವಣಿಗೆ ಆರಂಭಿಸಿದಿರಿ. ನಿಮ್ಮ ಮೇಲೆ ಆ ಪ್ರಭಾವ ತುಂಬಾ ಆಗಿರಬೇಕು.

**ರಾಘವ :** ನಮ್ಮ ನಮ್ಮಲ್ಲಿ ಅಂತಹ ಪರಸ್ಪರ Influence ಇತ್ತು. ನಮ್ಮ ನಡುವೆ ಭಾರಿ ಜಗಳವಾಡುತ್ತಿದ್ದೆವು. ಕೊಡಕೊಳ್ಳುವುದು ಸಾಹಿತ್ಯರಲ್ಲಿ ನಡೆದೇ ನಡೆಯುತ್ತೆ. ಅಡಿಗರೂ ನಮ್ಮೆಲ್ಲರಿಂದ Influence ಆದರು, ಯಾವ levelನಲ್ಲಿ ಇದು ನಡೆಯುತ್ತಿತ್ತು ಎಂದರೆ ಒಬ್ಬರ ಕತೆಯನ್ನ ಇನ್ನೊಬ್ಬರು ಹರಾಜು ಹಾಕುವ ಹಾಗೆ ಚರ್ಚಿಸ್ತಾ ಇದ್ವಿ. ಏನಯ್ಯ ಇದೆ ಇದರಲ್ಲಿ ಅಂತ ನಾನು ಅನಂತಮೂರ್ತಿ, ಸದಾಶಿವ ಅವರ ಕತೆಗಳ ಬಗ್ಗೆ ಕೇಳುತ್ತಿದ್ದುದು ಹಾಗೇ. ಅವರೂ ನನಗೆ ಕೇಳಿದ್ದೂ, ಅದೇ ರೀತಿ ಅಡಿಗರ ಪದ್ಯಕ್ಕೂ ಹೀಗೇ ಮಾಡ್ತಿದ್ವಿ. ಆಮೇಲೆ ಅಡಿಗರು ತುಂಬಾ ಸೂಕ್ಷ್ಮವಾಗಿಬಿಟ್ಟರು. ಶುರುವಿನಲ್ಲಿ ಅವರೂ ಹರಾಜು ಹಾಕುವುದನ್ನು Expect ಮಾಡುತ್ತಿದ್ದರು. ನಾವೆಲ್ಲರೂ ಅಡಿಗರ ಟ್ರೈನಿಂಗಿನಲ್ಲಿ ಬೆಳೆದವರು, ನಮ್ಮ ಸ್ನೇಹಕ್ಕೂ ಅದಕ್ಕೂ ಸಂಬಂಧ ಇರಲಿಲ್ಲ. ಹಾಗೆ ಹರಿದು ಚಿಂದಿ ಮಾಡುವುದೇ ನಮ್ಮ ಮೂಲ ಉದ್ದೇಶವಾಗಿತ್ತು. ಏಕೆಂದರೆ ಹಾಗೆ ಮಾಡುವುದರಿಂದ ನಾವು ಬೆಳೆಯೋಕೆ ಸಾಧ್ಯ ಎನ್ನೋ ನಂಬಿಕೆ ನಮಗೆ. ಆಗ ಬರೆಯುತ್ತಿದ್ದದ್ದು ಇಬ್ಬರು ಮೂವರನ್ನ ಮೆಚ್ಚಿಸೋಕೆ, ಅಡಿಗ Yes ಅಂದರೆ ಸಾಕು. ನಾವು ಗೌರವಿಸುವ ಮತ್ತೊಬ್ಬರು yes ಅಂದರೆ ಸಾಕು, ಈ ರೀತಿ. ನವ್ಯದಲ್ಲಿ ನಮ್ಮ Contribution ಇದ್ದರೆ ಆ ರೀತಿಯಲ್ಲಿ. ಆದ್ರೆ ಬರ್‍ತಾ ಬರ್‍ತಾ ಅಡಿಗರು Sensitive ಆದ್ರು, ಮತ್ತೊಬ್ಬರಾದ್ರು. ಪ್ರತಿಯೊಬ್ಬರು ಸಾಹಿತ್ಯದ UnCrowned Monarchs ಆದರು. ಎಲ್ಲಾ ಸಾಹಿತ್ಯ ಇತಿಹಾಸದಲ್ಲೂ ಇದು ಆಗುತ್ತೆ.

**ಕಾ. ತಾ. ಚಿಕ್ಕಣ್ಣ :** ನನಗೆ ಒಂದು ಅನುಮಾನ ಇದೆ. ಪ್ರಾರಂಭದ ಹಂತದ ಬರವಣಿಗೇಲಿ ಒಂದು ಬಗೆಯ ಮುಗ್ಧತೆ ಇರಿಸಿಕೊಂಡು ಬರೀತೀವಿ. ಈ ಮುಗ್ಧತೆ ಕೇವಲ ಮುಗ್ಧತೆ ಆಗಿರೋದಿಲ್ಲ. ಅಲ್ಲಿ ಒಂಥರಾ ಕುತೂಹಲ ಕೂಡಾ ಇರತ್ತೆ. ಅನಂತರದ ಸ್ಟೇಜ್‌ಗಳಲ್ಲಿ ಹೆಚ್ಚು Conscious ಆಗ್ತೀವಿ ಅನ್ನಿಸುತ್ತೆ. ಆಗ ಈ ತಂತ್ರದ ಕಸರತ್ತೆಲ್ಲಾ ನಡೆಸ್ತೀವಾ ?

**ರಾಘವ :** ಅದೊಂದು ಸಾಧ್ಯತೆ. ಓದುಗನದು–ಇವನದು ಇದ್ದೇ ಇರುತ್ತೆ ಆದ್ದರಿಂದ ಅವನು Experience ನ Dilute ಮಾಡಿ Communicate ಮಾಡ್ತಾ ಇರಬಹುದು ತಂತ್ರಗಾರಿಕೆಯಲ್ಲಿ ಇದು Dilute ಆಗ್ತಾನೂ

ಹೋಗತ್ತೆ ಹೇಗಾದರೂ Communicate ಮಾಡಬೇಕೆನ್ನೋದು ಚಿಕ್ಕಂದಿನಲ್ಲಿ ಇರೋದಿಲ್ಲ. ತಾನು ಬರೆಯೋದು ಒಳ್ಳೆಯದೆ ಅಲ್ಲವೆ ಅನ್ನೋ ವಿವೇಚನೆ ಮುಖ್ಯ. ನನಗೆ ಬದುಕು ಮುಖ್ಯ ಬರವಣಿಗೆ ಎರಡನೇದು.

**ಪ್ರಹ್ಲಾದ್ :** ಕತೆಯಲ್ಲಿ ಮಾಸ್ತಿ ನಂತರ ಲಂಕೇಶ್, ತೇಜಸ್ವಿ, ಅನಂತಮೂರ್ತಿ ಇಲ್ಲಿಗೇ Count ನಿಂತು ಹೋಗುತ್ತೆ ಏಕೆ ?

**ರಾಘವ :** ಕನ್ನಡದ್ದು ಒಂದು ಸಮಸ್ಯೆ ಇದೆ ನಮಗೆ ಐದು ಮಾತ್ರ ತುಂಬಾ ಮುಖ್ಯವಾದ ಹಾಗೆ, ಮೂರು ಜನರ ಎಣಿಕೆಯೂ ಅಭ್ಯಾಸವಾಗಿದೆ, ಹಿಂದಿನಿಂದ ನೋಡುತಾ ಬನ್ನಿ ಪಂಪ ರನ್ನ ಪೊನ್ನ ಹೀಗೆ...

**ನೇಮಿಚಂದ್ರ :** ಹೌದು ಹೀಗೆ ಆರಿಸಿಕೊಳ್ಳುವುದರಲ್ಲೇ ತಪ್ಪಿರಬಹುದು ಅನಿಸುತ್ತೆ. ಕೆಲವೇ ಜನರನ್ನ ಹೆಸರಿಸಿ ಉಳಿದವರ ಕೊಡುಗೆಯನ್ನು ಮರೆಯುವ ಸಾಧ್ಯತೆ ಇದೆ. ಈಗ ನೋಡಿ ಮಹಿಳೆಯರ ಕೊಡುಗೆಯ ವಿಷಯ ಬಂದಾಗ, ಅಕ್ಕ ಮಹಾದೇವಿ ನಂತರ ಈಗಿನ ಆಧುನಿಕ ಒಂದಿಬ್ಬರು ಲೇಖಕಿಯರ ಹೆಸರು ಹೇಳಿ ಮುಗಿಸಿಬಿಡುತ್ತಿದ್ದರು. ನಡುವೆ ಯಾರೂ ಬರೆಯಲೇ ಇಲ್ಲ ಎನ್ನುವಂತೆ. ಇದೀಗ ಚರಿತ್ರೆಯಲ್ಲಿ ಮರೆತ ಲೇಖಕಿಯರ ಕೊಡುಗೆಯನ್ನ ಅಧ್ಯಯನ ನಡೆಸುವ ಹಾಗೂ ನಮ್ಮ ಸ್ತ್ರೀ ಪರಂಪರೆಯನ್ನು ಗುರುತಿಸಿಕೊಳ್ಳುವ ಪ್ರಯತ್ನದಿಂದಾಗಿ ತಿರುಮಲಾಂಬಾ ಕಲ್ಯಾಣಮ್ಮ ಬೆಳಗೆರೆ ಜಾನಕಮ್ಮ, ಶ್ಯಾಮಲಾ ದೇವಿ, ಸಾವಿತ್ರಮ್ಮ ಅವರ ಕೃತಿಗಳನ್ನು ಪುನರ್ ಸ್ಮರಿಸುವ, ಅವರ ಕೊಡುಗೆಯನ್ನು ಗುರುತಿಸುವ ಪ್ರಯತ್ನ ನಡೆದಿದೆ.

**ಶ್ರೀಧರಮೂರ್ತಿ :** ನಿಮ್ಮ ಕತೆಗಳ ನಾಯಕ–ನಾಯಕಿ ರವಿ ಶಶಿಯಾಗಿಯೇ ಹೆಚ್ಚು ಕತೆಗಳಲ್ಲಿ ಪುನರಾವರ್ತಿತರಾಗಿರುವುದು ಅನೇಕ ವಿಶ್ಲೇಷಣೆಗೆ ಕಾರಣವಾಗಿದೆ. ನಿಮಗೆ ಈ ಬಗ್ಗೆ ಏನನ್ನಿಸುತ್ತೆ ?

**ನೇಮಿಚಂದ್ರ :** ಏನೆಲ್ಲ ಅರ್ಥ ಹೇಳಿದ್ದಾರೆ. ಒಬ್ಬರಂತೂ ರವಿ ಅನ್ನೋದು ಗಂಡಸು ಅನ್ನೋದು ಸ್ವಯಂಪ್ರಕಾಶ ಉಳ್ಳವನು. ಶಶಿ ಹೆಂಗಸು, ಬೆಳಕನ್ನು ಪ್ರತಿಫಲಿಸುವವಳು ಎಂದು ಕೂಡಾ ನನ್ನ ನಂಬಿಕೆಗೆ ವಿರುದ್ಧವಾಗಿ ಅರ್ಥೈಸಿದ್ದುಂಟು. ಆಗ ಕಷ್ಟಪಟ್ಟಾದರೂ ಹೆಸರು ಬದಲಾಯಿಸಬೇಕು ಅಂದುಕೊಂಡೆ. ಹೀಗೆ ಹೆಸರುಗಳನ್ನ ನಾನು ಪ್ರಜ್ಞಾಪೂರ್ವಕವಾಗಿ ಇಟ್ಟಿದ್ದಲ್ಲ. ನಿಜ ಎಂದರೆ, ನನಗೆ ಎರಡು ಅಕ್ಷರಗಳ ಸರಳ ಹೆಸರು ಇಷ್ಟ. ರವಿ–ಶಶಿ ಕೇವಲ ಗಂಡು ಹೆಣ್ಣುಗಳ ಸಂಕೇತಗಳು ಮಾತ್ರ ಹಲವು ಹತ್ತು ಸಂಬಂಧಗಳಲ್ಲಿ ಗಂಡ–ಹೆಂಡಿರಾಗಿ, ತಾಯಿ–ಮಗನಾಗಿ, ಗೆಳೆಯ–ಗೆಳತಿಯರಾಗಿ ಅನೇಕ ಸಂಬಂಧಗಳಲ್ಲಿ ಅವರು ಹೊರಬೀಳುತ್ತಾರೆ. ಓರ್ವ ವಿಮರ್ಶಕರು ಹೇಳಿರುವಂತೆ ಗಂಡು ಹೆಣ್ಣು

ಗಳಿಬ್ಬರೂ ಒಟ್ಟಿಗೇ ಪ್ರಜ್ವಲಿಸುವ ಘಳಿಗೆಗೆ ನಾ ಶೋಧಿಸುತ್ತಿರುವುದು ನಿಜ. ಸಮಾನರ ಸಂಬಂಧದ, ಸಾಂಗತ್ಯದ ಆಶಾವಾದ ನನ್ನದು.

**ಪ್ರಹ್ಲಾದ್ :** (ರಾಘವ ಅವರಿಗೆ) ಸಾರ್, ನೀವು ಇಂತಹದ್ಯಾವುದಾದರೂ ತಯಾರಿ ಬರವಣಿಗೆಗೆ ಮುಂಚೆ ಮಾಡ್ತೀರ ? ಸೃಜನಶೀಲ ಪ್ರಕ್ರಿಯೆಯನ್ನ ಯಾವ ತರಹ ವಿಶ್ಲೇಷಿಸುತ್ತೀರಿ ?

**ರಾಘವ :** Experience ಅನ್ನ ಹಾಗೇ ಕೊಡಲು ಆಗುವುದಿಲ್ಲ. ಕತೆಯಾಗಿಸಲು ಒಂದು Form develop ಮಾಡ್ತೇವೆ, ಈ form ಕೊಡುವ ರೀತಿಯೇ ಸೃಜನಶೀಲ ಪ್ರಕ್ರಿಯೆ. ಪ್ರತಿಯೊಂದು ಕತೆಗೂ ಜ್ಯಾಮಿತಿಯ ಪರಿಕಲ್ಪನೆ ಇರುತ್ತೆ. ಅದು ಸಿಕ್ಕುವವರೆಗೂ ಬರೆಯಲು ಆಗುವುದಿಲ್ಲ. Form ಸಿಕ್ಕಮೇಲೆ ಬರೆಯುವುದು, ಇಲ್ಲವೇ ಆ ಅನುಭವವನ್ನು Reject ಮಾಡಿ ಬಿಡಬಹುದು.

**ಶ್ರೀಧರ ಮೂರ್ತಿ :** ಈ ಹಿನ್ನೆಲೆಯಲ್ಲಿ ನಿಮ್ಮ ಎರಡು ಕೃತಿ ಕುರಿತು ಪ್ರಶ್ನೆ. 'ಮನೆ' ಅತಿಯಾದ ತಂತ್ರಗಾರಿಕೆಯ ಕೃತಿ, ವಿಕೃತಿ ತಂತ್ರಗಾರಿಕೆಯನ್ನೇ Demolish ಮಾಡಿದ ಕೃತಿ. ಈ ವಿರುದ್ಧ ಧ್ರುವಗಳ ನಡುವೆ ಸಂಚರಿಸಲು ನಿಮಗೆ ಹೇಗೆ ಸಾಧ್ಯವಾಯ್ತು.

**ರಾಘವ :** ಮನೆ ಕಾದಂಬರಿಯಲ್ಲಿ ಗಟ್ಟಿಯಾದ ಕತೆಯ ನೆಲೆಗಟ್ಟಿದೆ. ಅದಕ್ಕೆ ಒಂದು Form ಇದೆ. ವಿಕೃತಿ ಬರೆಯೋ ಸಂದರ್ಭದಲ್ಲಿ ನನಗೆ ಸೃಜನಶೀಲ ಪ್ರಕ್ರಿಯೆ ಬಗ್ಗೇನೇ ಅನುಮಾನ ಬರಲು ಆರಂಭವಾಗಿತ್ತು. ಭಾಷೇನೇ ನಮಗೆ ಮೋಸ ಮಾಡುತ್ತೆ, ಕಣ್ಣಿಗೆ ಕಾಣಿಸಿದ್ದೇ ಸತ್ಯವೆ ? ಇಂದ್ರಿಯಗಳ ಮೂಲಕ ಗ್ರಹಿಸಿದ್ದೇ ನಿಜವೇ ಅಥವಾ ಇಂದ್ರಿಯಗಳೇ ನಮಗೆ ಮೋಸ ಮಾಡುತ್ತವೆ. ಯಾವುದನ್ನೇ ಆಗಲಿ ಒಂದು formನಲ್ಲಿಡುತ್ತಿದ್ದಂತೆ ಅದು False ಆಗುತ್ತಲ್ಲ. ಹಾಗಾದರೆ ಸತ್ಯದ ದರ್ಶನ ಹೇಗೆ ? ವಿಕೃತಿಯಲ್ಲಿ ಒಂದೇ Experience ಅನ್ನ ಬೇರೆ ಬೇರೆ ಬಣ್ಣದಲ್ಲಿ ತೋರಿಸಿದ್ದೇನೆ. Readers ಅನ್ನ ಹ್ಯಾಗೆ fool ಮಾಡಬಹುದು ಅಂತ್ಲೂ ತೋರಿಸಿದ್ದೇನೆ. Experienceನ ಅದು ಇದ್ದ ಹಾಗೇ ಒಳಗೊಳ್ಳೋದು ಹೇಗೆ ? ಒಂದು Form ಕೊಡದೆ ; Illusion, Reality ಎಲ್ಲಾ ಬರೀ ಪದಗಳೇ, ಸುಳ್ಳು ನಿಜ ಎರಡೂ ಒಂದೇನೆ. ಇದದ್ದು ಚರಿತ್ರೆಯಾದಾಗ ಅದರ ರೂಪ ಹೇಗಾಗುತ್ತೆ. ಚರಿತ್ರೆಯಿಂದ ಇದ್ದದ್ದು ತೆಗೆದರೆ ಉಳಿದದ್ದು ವಾಸ್ತವವೆ ? ಪೂರ್ಣ ತೆಗೆದರೂ ಪೂರ್ಣ ಉಳಿಯುತ್ತೆ ಸೇರಿಸಿದರೂ ಪೂರ್ಣವೇ ಉಳಿಯುತ್ತೆ. ಅಂತ ಕಾದಂಬರಿ ಕೊನೆ ಆಗುತ್ತೆ, Exprience ಹಾಗೇ ಆಗುತ್ತೆ. ಯಾವುದೂ Matter ಆಗಲ್ಲ ಅಥವಾ

ಎಲ್ಲವೂ Matter ಆಗುತ್ತೆ. Experienceಗೂ ಹಾಗೇ ಆಗುತ್ತೆ ಯಾದೂ Matter ಆಗಲ್ಲ ಅಥವಾ ಎಲ್ಲವೂ matter ಆಗುತ್ತೆ ಎನ್ನುವಲ್ಲಿ ಕಾದಂಬರಿ ಮುಗಿದಿದೆ. ಮುಖ್ಯವಾಗಿ What happens to the present when it becomes past & what is the past ಎನ್ನುವುದು ಕೃತಿಯ ವಸ್ತು.

---

ಬಂಡಾಯ ಕತೆಗಳು ಪ್ರತಿ ಸಂಸ್ಕೃತಿಯೊಂದನ್ನು ನಿರ್ಮಿಸುವ ಆಶಯ ಪಡೆದಿದೆ. ಕೆಳವರ್ಗಗಳು ಸ್ತ್ರೀಯರು ಅಲ್ಪಸಂಖ್ಯಾತರೂ ಹೆಚ್ಚು ದಿಟ್ಟವಾಗಿ ಬರೆಯಲಾರಂಭಿಸಿರುವುದು ಇದಕ್ಕೆ ಸಾಕ್ಷಿಯಾಗಿದೆ. ಬಂಡಾಯ ಕತೆಗಾರರು ಶೋಷಣೆಯ ಕಲ್ಪನೆಗೆ ಜೋತು ಬಿದ್ದಿಲ್ಲ ಎಂಬುದಕ್ಕೆ ವಾಲಿಕಾರ, ನಾಗವಾರ, ಕರಿಗೌಡ, ರಷೀದ್ ಮೊದಲಾದವರ ಕತೆಗಳು ಉದಾಹರಣೆಯಾಗಿವೆ. ಆದರೂ ಬದುಕಿನ ಎಲ್ಲ ಚೆಲುವು ವೈವಿಧ್ಯಗಳಿಗೆ ವಿಸ್ಮಯಪಡುವ ಗುಣವೊಂದು ಕಡಿಮೆಯಾಗಿದೆ ಎನಿಸುತ್ತದೆ.. ಬಂಡಾಯ ಕತೆಯನ್ನು ಮೀರುವ ಹೊಸ ಮಾರ್ಗವೊಂದು ಕಾಣಿಸುತ್ತಿದೆಯೇ ? ಎಂದರೆ ಸದ್ಯಕ್ಕೆ ಇಲ್ಲವೆನ್ನಬಹುದು ಅಥವಾ ಬಂಡಾಯ ಲೇಖಕರು ಈಗೀಗ ಬರೆಯಲು ಶುರು ಮಾಡಿರುವುದರಿಂದ ಅದರ ಸಾಧ್ಯತೆಗಳು ಮುಗಿದಿವೆ ಎಂಬಂತೆ ಯೋಚಿಸುವುದಾದರೂ ಯಾಕೆ ?

**ಡಾ. ರಹಮತ್ ತರೀಕೆರೆ**
ದಲಿತ ಬಂಡಾಯ ಕಥೆಗಳನ್ನು ಕುರಿತು

---

# ನಾನೇಕೆ ಕತೆ ಬರೆಯುತ್ತೇನೆ ?

**ನಾ. ಡಿಸೋಜ**

ಹೌದು, ನಾನೇಕೆ ಕತೆ ಬರೆಯುತ್ತೇನೆ ? ಬಹಳ ಬೇಗ ಬರೆದು ಮುಗಿಸಬಹುದೆಂದೆ ? ಬಹಳ ದಿನಗಳವರೆಗೆ ಅದೇ ಗುಂಗಿನಲ್ಲಿ ಇರುವ ಅವಶ್ಯಕತೆ ಇಲ್ಲವೆಂದೆ ? ಹಲವಾರು ಪಾತ್ರಗಳನ್ನು, ಸಂದರ್ಭಗಳನ್ನು, ಘಟನೆಗಳನ್ನು ತರುವ ಗೊಂದಲ ಇಲ್ಲವೆಂದೆ ? ನಾಟಕ. ಕಾವ್ಯ ಬರೆಯುವುದು ಕಷ್ಟವೆಂದೆ ? ಇಲ್ಲ. ಹೀಗೇನೂ ನನಗೆನಿಸುವುದಿಲ್ಲ. ಕಾದಂಬರಿ, ನಾಟಕ ಕಾವ್ಯಗಳ ಕಟ್ಟೋಣ ಬೇರೆ. ಹೀಗೆಂದು ಅದು ಸುಲಭ ಇದು ಕಷ್ಟ ಎಂದಾಗಲಿ ಇದು ಸುಲಭ ಅದು ಕಷ್ಟ ಎಂದಾಗಲಿ ತಿಳಿದು ಕೊಂಡರೆ ತಪ್ಪು. ಒಟ್ಟಾರೆ ಸಾಹಿತ್ಯ ರಚನೆಯೇ ಕಷ್ಟಕರವಾದದ್ದು. ಹಾಗಾದರೆ ನಾನು ಕತೆಯನ್ನೇ ಏಕೆ ಬರೆಯುತ್ತೇನೆ ?

ಜಗನಮೋಹನ ಚಿತ್ರಶಾಲೆ (ಮೈಸೂರು)ಯಲ್ಲಿ ಬೀರೇಶ್ವರ ಸೇನ ಬರೆದ ಹಲವಾರು ಚಿತ್ರಗಳಿವೆ. ಒಂದು ಬೆಂಕಿಪೊಟ್ಟಣದ ಮೇಲೆ ಹಚ್ಚುವಷ್ಟು ಕಿರಿದಾದ ಚಿತ್ರಗಳು. ಕೆಂಪು, ಹಸಿರು, ಹಳದಿ ಮತ್ತಿತರ ಬಣ್ಣಗಳೇ ಈ ಚಿತ್ರಗಳಲ್ಲಿ ತುಂಬಿ ಕೊಂಡಿರುತ್ತದೆ. ಒಂದು ಪರ್ವತಗಳ ಸಾಲು, ಅಲ್ಲೊಂದು ಹಕ್ಕಿ ಆಕಾಶದಲ್ಲಿ, ಎತ್ತರವಾದ ಬೆಟ್ಟಗಳು, ಕೆಳಗೆ ಒಂಟಿ ಪಯಣಿಗ. ಈ ಚಿತ್ರಗಳಲ್ಲಿ ಕಣ್ಣಲ್ಲಿ ಕಣ್ಣಿಟ್ಟು ಸುತ್ತಲಿನ ಪ್ರಪಂಚ ಮರೆತು ಸೂಕ್ಷ್ಮವಾಗಿ ನೋಡುತ್ತ ಹೋದ ಹಾಗೆ. ಈ ಕಿರುಚಿತ್ರವೇ ನಮ್ಮನ್ನು ಆಕ್ರಮಿಸಿಕೊಂಡು ಯಾವುದೋ ಒಂದು ದಿವ್ಯ ಅನುಭವವನ್ನು ಕಾಣ್ಕೆಯನ್ನು, ಸಂದೇಶವನ್ನು, ಧ್ವನಿಯನ್ನು ನಮಗೆ ನೀಡುತ್ತವೆ. ನಾನು ಮೈಸೂರಿನಲ್ಲಿದ್ದಷ್ಟು ದಿನ ಅಲ್ಲಿ ಹೋಗಿ ಈ ಚಿತ್ರಗಳನ್ನು ನೋಡಿ ಮೈಮರೆಯುತ್ತಿದ್ದೆ. ಈ ಕಲಾವಿದ ಅಂಗೈ ಅಗಲದ ಚಿತ್ರಗಳಲ್ಲಿ ಮಾಡಿದ ಕೆಲಸವನ್ನೇ ವಿಶಾಲವಾದ ಅಗಲವಾದ ಕ್ಯಾನವಾಸಿನ ಮೇಲೆ ಮಾಡಿದ್ದಿದ್ದರೆ ? ಇಂದು ಅವನ ಚಿತ್ರವು ಯಾವ ಪರಿಣಾಮವನ್ನು ಉಂಟುಮಾಡುತ್ತದೋ ಆ ಪರಿಣಾಮವನ್ನು ಈ ದೊಡ್ಡ ಚಿತ್ರ ಮಾಡುತ್ತಿರಲಿಲ್ಲ ಎಂದೆನಿಸುತ್ತದೆ ನನಗೆ. ಬೀರೇಶ್ವರ ಸೇನನ ಅಂಗೈ ಅಗಲದ ಈ ಚಿತ್ರಗಳು ಏನಿವೆ– ಇವೇ ಸಣ್ಣ ಸಣ್ಣ ಕತೆಗಳು.

ಸಣ್ಣಕತೆ ಬರೆಯುವಾಗ ನನಗಾಗುವ ಅನುಭವವೇ ಬೇರೆ. ಒಂದು ವಿಚಾರದ ವಿಶ್ಲೇಷಣೆಯನ್ನು ಮೂರು ನಾಲ್ಕು ಪಾತ್ರಗಳ ಮೂಲಕ ಒಂದೆರಡು ಘಟನೆಗಳ

ಮುಖಾಂತರ ಅಲ್ಪಕಾಲಾವಧಿಯಲ್ಲಿ ಮಾಡಿ ಮುಗಿಸಬೇಕು. ಬರವಣಿಗೆಯ ಮೇಲೆ ಹಿಡಿತ ಇರಬೇಕು. ಹೇಳಬೇಕಾದುದನ್ನು ಕೆಲವೇ ವಾಕ್ಯಗಳಲ್ಲಿ ಪರಿಣಾಮಕಾರಿಯಾಗಿ ಹೇಳಬೇಕು. ಇಲ್ಲಿ ವಾಚಾಳಿತನಕ್ಕೆ ಅವಕಾಶವಿಲ್ಲ. ಹರಟೆಗೆ ಆಸ್ಪದವಿಲ್ಲ. ವ್ಯರ್ಥಾಲಾಪಕ್ಕೆ ಅನುಮತಿ ಇಲ್ಲ.

ಸಣ್ಣಕತೆ ಸಮಗ್ರ ಜೀವನವಲ್ಲ. ಆದರೆ ಜೀವನದ ಒಂದು ಮುಖ. ಒಂದು ಪಾರ್ಶ್ವ. ಹೀಗೆಂದು ಸಮಗ್ರ ಜೀವನದ ಅರಿವಿಲ್ಲದೆ ಕತೆಯನ್ನು ಬರೆಯುವುದು ಕಷ್ಟ. ಕತೆಯಲ್ಲಿ ತನಗೆ ಗೊತ್ತಿರುವುದನ್ನೆಲ್ಲ ಹೇಳುತ್ತೇನೆ ಅನ್ನುವುದು ಮೂರ್ಖತನ. ಆಗ ಅದು ಕತೆಯಾಗುವುದಿಲ್ಲ. ಕಾದಂಬರಿಯೋ ಹರಟೆಯೋ ಮತ್ತೇನೋ ಆಗಬಹುದಷ್ಟೆ.

ಕತೆ ಅಂದರೇನೆ ಸಣ್ಣದು. ಅದು ಸಣ್ಣದಾಗಿ ಇರಬೇಕಾದರೆ ಕೆಲವೊಂದು ಮಿತಿಗಳು, ಒಂದು ಚೌಕಟ್ಟು ಇರಬೇಕು. ಈ ಚೌಕಟ್ಟಿನಲ್ಲಿ ಕೆಲಸ ಮಾಡುವುದರಲ್ಲಿ ಅಪಾಯವೂ ಇದೆ ಸಂತೋಷವೂ ಇದೆ. ತಂತಿಯ ಮೇಲೆ ನಡೆದ ಹಾಗೆ ಕತೆ ಬರೆಯುವುದು. ನೋಡುವುದಕ್ಕೂ ರೋಮಾಂಚನ, ನಡೆಯುವುದಕ್ಕೂ ಕೂಡ. ಈ ಖುಷಿಗಾಗಿ ನಾನು ಕತೆ ಬರೆಯುತ್ತೇನೆ. ಓದುಗರಿಗೂ ಇದೇ ಖುಷಿ ಸಿಕ್ಕರೆ ನನಗೂ ಸಂತೋಷವೆ. ಇನ್ನೂ ವಿವರವಾಗಿ ಬರೆದರೆ ತಪ್ಪಾಗುತ್ತದೆ ಏಕೆಂದರೆ ಸಣ್ಣ ಕತೆ ನಾನೇಕೆ ಬರೆಯುತ್ತೇನೆ ಎಂಬ ಬಗ್ಗೆ ಸಂಪಾದಕರು "ಪುಟ್ಟ" ಲೇಖನ ಕೇಳಿದ್ದಾರಲ್ಲ !

# ಕನ್ನಡ ಸಣ್ಣಕತೆಗಳ ವಿಭಿನ್ನ ನೆಲೆಗಳು

ಎನ್. ಎಸ್. ಶ್ರೀಧರಮೂರ್ತಿ

೧

ಶತಮಾನದಷ್ಟು ದೂರ ಸಾಗಿ ಬಂದಿರುವ ಕನ್ನಡ ಸಣ್ಣಕತೆಗಳ ಕುರಿತು ಬಂದಿರುವ ಬರಹಗಳನ್ನು ನೋಡಿದಾಗ ಒಂದು ಅಚ್ಚರಿ ನನ್ನನ್ನು ಪದೇ ಪದೇ ಕಾಡಿತು. ಕೆಲವೇ ಲೇಖಕರ ಕೆಲವೇ ಕತೆಗಳು, ಕನ್ನಡದ ಕಥಾ ಪರಂಪರೆ ಇಷ್ಟೇ ಎನ್ನುವಷ್ಟು ಬಹು ಚರ್ಚಿತವಾದರೆ. ಉಳಿದ ಕತೆಗಳ ಬಹು ದೊಡ್ಡ ಭಾಗವೇ ಸತತ ಅವಜ್ಞೆಗೆ ಗುರಿಯಾಗಿದೆ. ಹಲವು ದಶಕಗಳಲ್ಲಿ ತಮ್ಮ ಬರಹಗಳನ್ನು ಕೊಟ್ಟ ಬರಹಗಾರರನ್ನು ಕೆಲವು ಪಂಥಗಳಿಗೆ ಸೀಮಿತಗೊಳಿಸಿ ಅದರ ಬಹುಮುಖಿ ಅಸ್ತಿತ್ವವನ್ನೇ ನಿರ್ಲಕ್ಷಿಸಿದ ಇನ್ನೊಂದು ಸೋಜಿಗದ ಸಂಗತಿಯೂ ಕಣ್ಣಿಗೆ ಬಿತ್ತು. ಹೀಗಾಗಿ ಸಣ್ಣಕತೆಗಳ ಕುರಿತು ಬರೆಯುವ ಸಂದರ್ಭದಲ್ಲಿ ಕತೆಗಳ ನೆಲೆಗಳಿಗೆ ಮುಖಾಮುಖಿಯಾಗಿ ಅಧ್ಯಯನ ನಡೆಸುವುದು ಕೆಲಮಟ್ಟಿಗಾದರು ಅದರ ಸೂಕ್ಷ್ಮಕ್ಕೆ ಸ್ಪಂದಿಸುವ ದೃಷ್ಟಿಯಿಂದ ಅನಿವಾರ್ಯ ಎಂದು ಅಧ್ಯಯನದ ಆಕೃತಿಯನ್ನು ಮಾರ್ಪಡಿಸಿಕೊಂಡಿದ್ದೇನೆ.

ಈ ಶತಮಾನದ ಆರಂಭದಲ್ಲಿ ಪಂಜೆ ಮಂಗೇಶರಾಯರು, ಎಂ. ಎನ್. ಕಾಮತ್ ಕೆರೂರು ವಾಸುದೇವಾಚಾರ್ಯ ನಡೆಸಿದ ಪ್ರಯೋಗಗಳು ಕಥೆಯ ಪ್ರಕಾರದ ಆರಂಭಿಕ ಸಜ್ಜಿಕೆಗಳಾದವು. ಕೆರೂರರ "ಮಲ್ಲೇಶಿಯ ನಲ್ಲೆಯರು" ಹೆಣ್ಣು ಗಂಡಿನ ಮತ್ತು ದಣಿ–ಆಳಿನ ಹೊಸ ಕಲ್ಪನೆಯನ್ನು ಶಿಲ್ಪದಲ್ಲಿ ಪಡೆದ ಮಹತ್ವದ ರಚನೆ. ಕನ್ನಡ ಸಣ್ಣ ಕತೆಗೆ ಸ್ಪಷ್ಟರೂಪ ಬಂದದ್ದು ಮಾಸ್ತಿಯವರಿಂದಲೇ ಬದುಕನ್ನು ಅರ್ಥೈಸುವ ಅರ್ಥ ಮಾಡಿಕೊಳ್ಳುವ ಪ್ರಕಾರವಾಗಿ ಮಾಧ್ಯಮವನ್ನು ಅವರು ನಿರ್ವಹಿಸಿದ ರೀತಿ ಕನ್ನಡಕ್ಕೆ ಒಂದು ಅಭಿವ್ಯಕ್ತಿ ಪ್ರಕಾರವನ್ನೇ ವರದಾನವಾಗಿ ನೀಡಿತು. ಮಾಸ್ತಿಯವರ ಹೆಗ್ಗಳಿಕೆ ಇರುವುದು ಅವರು ಕತೆ ಹೇಳುವಲ್ಲಿ ವಹಿಸಿದ ಎಚ್ಚರದಲ್ಲಿ. ಯಾರಿಂದಲೊ ಕೇಳಿದ ಮಾದರಿಯಲ್ಲಿ ಕತೆ ನಿರೂಪಿಸುವ ಕ್ರಮ ಆರಂಭಿಕ ಹಂತಕ್ಕೆ ತೀರಾ ಅಗತ್ಯವಾಗಿತ್ತು. ಇದರಿಂದ ಕತೆಯ ಓದನ್ನು ಗ್ರಹಿಕೆಯನ್ನು ವಿಸ್ತಾರವಾಗಿಯೇ ಪಡೆಯುವುದು ಅವರಿಂದ ಸಾಧ್ಯವಾಯಿತು. ಇದೇ ಹಂತದಲ್ಲಿ ಕತೆಗಳನ್ನು ಬರೆದ ಎ. ಆರ್. ಕೃಷ್ಣಶಾಸ್ತ್ರಿಯವರ

"ಗುರುಗಳ ಮಹಿಮೆ" ಕತೆಗೆ ತಂತ್ರ ಒದಗಿಸಲು ಅವರು ಪೇಚಾಡಿರುವ ರೀತಿ ಮಾಸ್ತಿಯವರ ಮಹತ್ವವನ್ನು ತೋರಿಸುತ್ತದೆ. ಕೃಷ್ಣಶಾಸ್ತ್ರಿಗಳು ಈ ಕತೆ ನಿರೂಪಿಸಲು ಪಡಬಾರದ ಕಷ್ಟವನ್ನೆಲ್ಲ ಪಟ್ಟು ಕೊನೆಗೆ ಕತೆಯ ಸಾರಾಂಶವನ್ನೇ ಆರಂಭದಲ್ಲಿ ಕೊಟ್ಟು ಬಿಟ್ಟಿದ್ದಾರೆ. ಮಾಸ್ತಿ ಕತೆಗಳನ್ನು ಓದಿ ಪ್ರಭಾವಿತರಾಗಿ ಬರೆಯಲು ಆರಂಭಿಸಿದವರು ಹಲವರು. ಕೆ. ಗೋಪಾಲಕೃಷ್ಣರಾವ್, ಸಿ. ಕೆ. ವೆಂಕಟಾಚಾರ್, ಅಶ್ವತ್ಥ, ಬಾಗಲೋಡಿ ದೇವರಾಯ, ಆನಂದ ಹೀಗೆ ದೊಡ್ಡ ಪಟ್ಟಿಯೇ ಇದೆ. ಆದರೆ ಇವರಲ್ಲಿ ಹೆಚ್ಚಿನವರು ಕಥನಕಲೆ ಬಗ್ಗೆ ಎಚ್ಚರ ವಹಿಸದಿದ್ದರಿಂದ ಉಳಿದುಕೊಂಡ ಹೆಸರುಗಳು ತೀರ ಅಲ್ಪ. ಆನಂದರ "ನಾನು ಕೊಂದ ಹುಡುಗಿ" ಕತೆಯನ್ನು ಇದಕ್ಕೆ ಉದಾಹರಣೆಯಾಗಿ ನೋಡಬಹುದು. 'ಬಸ್ವಿ'ಯಾಗಿರುವ ಹುಡುಗಿಯೊಬ್ಬಳಿಗೆ ನೀತಿ ಪಾಠ ಮಾಡಿದ ಪರಿಣಾಮ ಅವಳು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ನಿರೂಪಕ ಅವಳನ್ನು ತನ್ನ ನೀತಿ ಪಾಠದಿಂದ ಸತ್ತ ಹುಡುಗಿ ಎಂಬ ಕಾರಣಕ್ಕಾಗಿ 'ಕೊಲೆ' ಎಂಬ ಭಾವುಕ ನೆಲೆಗೆ ಸಿಕ್ಕುತ್ತಾನೆ. ಅವನು ನೀತಿ ಪಾಠ ಮಾಡಬಾರದಿತ್ತೆ ಎಂಬ ಪ್ರಶ್ನೆಗೆ ಕತೆಯಲ್ಲಿ ಜಾಗವೇ ಇಲ್ಲ. ಆನಂದರ "ರಾಧೆಯ ಕ್ಷಮೆ" ಎಂಬ ಇನ್ನೊಂದು ಕತೆಯಲ್ಲೂ ಇಂತಹ ಭಾವುಕ ಪರಿಸರವೇ ಇದೆ. ದಾಂಪತ್ಯ ಪ್ರಣಯದ ಕುರಿತೇ ಹೆಚ್ಚಾಗಿ ಬರೆದ ಆನಂದರು ಭಾವುಕತೆ ಭಾರ ಕಳಚಿಕೊಂಡಿದ್ದರೆ ಕನ್ನಡಕ್ಕೆ ಮಹತ್ವದ ಕತೆ ಕೊಡುತ್ತಿದ್ದರು. ಜಾಣತನದಿಂದ ಕತೆ ಬರೆದ ಅಶ್ವತ್ಥರಿಗೆ ಈ ಜಾಣತನವೇ ಸಮಸ್ಯೆಯಾಗಿ ಕಲೆಗೆ ನೆಲೆ ಕೊಡುವುದು ಕಷ್ಟವಾಯಿತು. ಮಾಸ್ತಿಯವರಂತೆ ಕಾಲವನ್ನು ಹಿಂದಕ್ಕೆ ಇಡುವ ತಂತ್ರ ಬಳಸಿದ ಬಾಗಲೋಡಿ ದೇವರಾಯ ಇವರಿಬ್ಬರಿಗೆ ಹೋಲಿಸಿದರೆ ಗೆದ್ದ ಕತೆಗಾರ. "ಅಜ್ಜ ನೆಟ್ಟಮರ" ಇಂತಹ ಶಕ್ತಿಗೆ ನಿದರ್ಶನವಾದ ಕತೆ. ಅವರು ಹೆಚ್ಚು ಬರೆಯದಿದ್ದುದು ಕನ್ನಡಕ್ಕಾದ ನಷ್ಟ. ಕೃಷ್ಣಕುಮಾರ ಕಲ್ಲೂರರ "ಗುಬ್ಬಿಗಳ ಸಂಸಾರ" ಗಮನಿಸಬೇಕಾದ ಈ ಹಂತದ ಕತೆ ಭಾವನಾತ್ಮಕ ಭಾಷೆಯಲ್ಲಿ ವಾಸ್ತವಿಕತೆ ಹೇಳ ಹೊರಟಿರುವುದೇ ಅದರ ವೈಶಿಷ್ಟ್ಯ. ಈ ಆರಂಭದ ಹೆಚ್ಚಿನ ಕತೆಗಳು ವ್ಯಕ್ತಿಯನ್ನೇ ನೆಲೆಯಾಗಿ ಉಳ್ಳವು ಅವನ ಗ್ರಹಿಕೆಯನ್ನು ಪೂರ್ಣವಾಗಿ ನಂಬಿದಂತವುಗಳು. 'ಸಮಾಜ' ಮುಖ್ಯವಾಗಬೇಕು ಎಂಬ ಧೋರಣೆ ಕೇಳಿ ಬಂದಾಗ ಹೊಸ ಮಾದರಿ ಕತೆಗಳು ಬಂದವು. ಕೊರಡ್ಕಲ್ ಶ್ರೀನಿವಾಸರಾಯರ "ಧನಿಯರ ಸತ್ಯನಾರಾಯಣ", ಭಾರತಿಪ್ರಿಯರ "ಮೋಚಿ", ಎಂ. ವಿಠಲ್ ಹೆಗ್ಡೆಯವರ "ವಿಚಾರಣೆ", ಅ.ನ.ಕೃ. ಅವರ "ಅನ್ನದ ಕೂಗು" ಇಂತಹ ಹಿನ್ನೆಲೆಯಲ್ಲಿ ಬಂದ ಕತೆಗಳು ಹೃದಯ ಹೀನ ಶ್ರೀಮಂತಿಕೆ, ಮುಗ್ಧ ಬಡತನಗಳ ಸಂಘರ್ಷದ ಕಪ್ಪು ಬಿಳುಪಿನ ಚಿತ್ರಗಳೇ ಹೆಚ್ಚಾಗಿರುವುದರಿಂದ ಘೋಷಣೆಗಳು ಪದೇ ಪದೇ ಕೇಳಿ ಬರುತ್ತವೆ. "ಬಸವರಾಜಕಟ್ಟೀಮನಿ ಯವರಲ್ಲಂತು ಘೋಷಣೆಗಳೇ ತುಂಬಿ ಅನೇಕ ಬಾರಿ ಕತೆಯೇ ಸಾಪತ್ತೆ ಆಗಿ ಬಿಡುತ್ತದೆ. ನಿರಂಜನರೊಬ್ಬರೇ ಸ್ವಲ್ಪ ತೂಕಬದ್ದ ಕತೆಗಳನ್ನು ಕೊಟ್ಟವರು. ಯೋಜಿತ ಅನ್ನಿಸಿದರೂ. ಅವರ "ಕೊನೆಯ ಗಿರಾಕಿ"

ಶೋಷಣೆಯ ಎಳೆ ಎಳೆಯನ್ನು ಪ್ರಭಾವಶಾಲಿಯಾಗಿ ಬಿಚ್ಚುತ್ತದೆ. ತಮ್ಮ ಸಾಮಾಜಿಕ ಕಾಳಜಿ ಅಭಿವ್ಯಕ್ತಿಸಬಲ್ಲ ತಂತ್ರಗಾರಿಕೆ ರೂಪಿಸಿಕೊಳ್ಳದೆ ಹೋದದ್ದು ಈ ಹಂತದ ಕತೆಗಾರರ ದೊಡ್ಡ ದೌರ್ಬಲ್ಯವಾಯಿತು. ಇಷ್ಟಾದರು ಕತೆಗಳ ಪರಿಧಿಯನ್ನು ಅವರು ಹಿಗ್ಗಿಸಿದರು ಎಂಬುದು ಮರೆಯಬಾರದ ಅಂಶ.

೨

"ಈಗ ನಮ್ಮ ತರುಣ ಸಾಹಿತಿಗಳನೇಕರು ಬರೆಯುತ್ತಿರುವ ಸಣ್ಣ ಕತೆ, ನೀಳ್ಗತೆಗಳಲ್ಲಿ ಬಳಸುತ್ತಿರುವ ಗದ್ಯಕ್ಕೂ ನಮ್ಮ ಹಿಂದಿನ ತಲೆಮಾರಿನ ಹಿರಿಯ ಸಾಹಿತಿಗಳು ಬರೆಯುತ್ತ ಬಂದಿರುವ ಗದ್ಯಕ್ಕೂ ಮೂಲಭೂತವಾದ ವ್ಯತ್ಯಾಸವೇ ಕಂಡುಬರುತ್ತಿದೆ" ಇದು ಗೋಪಾಲಕೃಷ್ಣ ಅಡಿಗರು ಯಶವಂತ ಚಿತ್ತಾಲರ 'ಆಟ' ಸಂಕಲನಕ್ಕೆ ಬರೆದ ಮುನ್ನುಡಿಯಲ್ಲಿ ಬರೆದ ಮಾತು. ಇದು ಅರವತ್ತರ ದಶಕದ ಕತೆಗಳಲ್ಲಾದ ಬದಲಾವಣೆಯನ್ನು ಸೂಚಿಸುತ್ತದೆ. ಈ ಹಂತದ ಕತೆಗಳಲ್ಲಿ ಮುಖ್ಯವಾಗಿ ಭಾಷೆ ಮತ್ತು ತಂತ್ರದಲ್ಲಿ ಗಮನಾರ್ಹವಾಗಿ ಬದಲಾವಣೆ ಉಂಟಾಯಿತು. ಕತೆ ಹೇಳುವ ರೀತಿಗೂ ಇಲ್ಲಿ ಪ್ರಾಧಾನ್ಯತೆ ಬಂದಿತು. ಇಂತಹ ಒಂದು ಪ್ರಯತ್ನವಾಗಿ ಬಿ. ಸಿ. ರಾಮಚಂದ್ರಶರ್ಮ ಅವರ "ಕೊಡತಿ ಹುಳ" ಎಂಬ ಕತೆಯ ಈ ವಾಕ್ಯವನ್ನು ಗಮನಿಸಬಹುದು . "ಮುತ್ತು ಕೊಡು" ಎಂದು ಸೇರಾ ಕೇಳಿದಾಗ ಜಾನಿ ಕ್ರಿಯೆ ಹೀಗಿದೆ–

"ಅವನ ಮುಖ ಕೆಂಡವಾಗಿತ್ತು. ಹೇಗೆ ಅನ್ನುವುದು ಗೊತ್ತಿರದೆ ತನ್ನ ತುಟಿಗಳನ್ನು ಅವಳ ತುಟಿಗಳ ಮೇಲೆ ಇಟ್ಟು ಬಲವಾಗಿ ಅವುಕಿದ. ಸಣ್ಣಗೆ ನಕ್ಕ ನೇರ ಮೆಲ್ಲಗೆ ತನ್ನ ತುಟಿಗಳಿಂದ ಅವನ ತುಟಿಗಳ ಮಧ್ಯೆ ಸೆರೆ ಹಿಡಿದು ಹೀರಿದಾಗ ಅವನ ಮೈ ಬೆಚ್ಚಗಿನ ಕನಸು ಹಗಲಲ್ಲೆ ಮರುಕಳಿಸಿತು."

ಎರಡು ವಿಭಿನ್ನ ಅನುಭವಗಳನ್ನು ಸೆರೆ ಹಿಡಿಯಲು ಭಾಷೆ ಸೂಕ್ಷ್ಮವಾಗಿ ಬಳಕೆಯಾಗಿರುವ ಕ್ರಮವನ್ನು ಇಲ್ಲಿ ಗಮನಿಸಬಹುದು. ವ್ಯಾಸರಾಯ ಬಲ್ಲಾಳರ "ಬಿಡುಗಡೆ" ಇದೇ ಹಂತದ ಉತ್ತಮ ಕತೆ. ವಾಸ್ತವ ಭ್ರಮೆಗಳ ನಡುವೆ ಕತೆ ಸಂಚರಿಸುವ ವೇಗವೇ ಅಚ್ಚರಿ ಹುಟ್ಟಿಸುವಂತಹದು. ಟಿ. ಜಿ. ರಾಘವ ಅವರ 'ಶ್ರಾದ್ಧ' ವ್ಯಕ್ತಿಗತ ಚಿಂತನೆ, ಸಾಮಾಜಿಕ ಸಂಬಂಧಗಳ ಘರ್ಷಣೆಗೆ ಸಿಕ್ಕಿದ ದುರ್ಬಲ ನಾಯಕನೊಬ್ಬನ ಕತೆ. ರಾಘವೇಂದ್ರ ಖಾಸನೀಸರ "ತಬ್ಬಲಿಗಳು" ತಂತ್ರಗಾರಿಕೆಯನ್ನು ಮರುಕಟ್ಟಲು ಪ್ರಯತ್ನಿಸಿದ ವಿಶಿಷ್ಟ ಕತೆ. ಇವೆಲ್ಲ ಬಿಡಿ ಬಿಡಿ ಯಶಸ್ಸಾದರೆ ಸೂಕ್ಷ್ಮ ಗ್ರಹಿಕೆಯನ್ನೇ ಕಥೆಯ ಶರೀರವಾಗಿಸಿ ಮಾನವೀಯ ಸಂಬಂಧಗಳ ಹುಡುಕಾಟಕ್ಕೆ ತೊಡಗಿದ ಯಶವಂತ ಚಿತ್ತಾಲರ ಕತೆಗಳೇ ಭಿನ್ನ ಮಾದರಿಯವು. "ಆಟ" ಮತ್ತು "ಸೆರೆ" ಈ ಹಂತದಲ್ಲಿ ಚಿತ್ತಾಲರ ಶ್ರೇಷ್ಠ ಕೊಡುಗೆಗಳು. ಮುಂದೆ "ಹುಡುಕಾಟ"ವೇ ಒಂದು

ಗೀಳಾಗಿ ಚಿತ್ತಾಲರ ಕತೆಗಳನ್ನು ಏಕತಾನತೆ ಕಾಡಲಾರಂಭಿಸಿತು. ಪ್ರಜ್ಞಾಪೂರ್ವಕವಾಗಿ ಬರೆಯುತ್ತಾರೆ ಎಂಬ ಅನುಮಾನ ಪದೇ ಪದೇ ಮೂಡುವಂತೆ ಬರೆಯುವ ಅನಂತಮೂರ್ತಿ ಭಾಷೆಯನ್ನು ಸಾಕಷ್ಟು ಹಿಗ್ಗಿಸಿದವರು. "ನವಿಲುಗಳು" ಕತೆ ದಾಂಪತ್ಯ ಕುರಿತು ಮಾತನಾಡುವ ರೀತಿ ಇದಕ್ಕೆ ಸಾಕ್ಷಿ. ಮುಂದೆ ದಶಕಗಳಾಚೆ ಅವರು ಬರೆದ "ಸೂರ್ಯನ ಕುದುರೆ" ಕತೆಯಲ್ಲಿ ಭಾಷೆ ಅಗತ್ಯಕ್ಕಿಂತ ಸಂಕೀರ್ಣವಾಗಿ ಗ್ರಹಿಕೆಗೇ ತೊಡಕಾದದ್ದು ಅವರ ಮಿತಿಯೂ ಹೌದು. ಆದರೆ ತಂತ್ರಗಾರಿಕೆ ಈ ಹಂತದ ಅನೇಕ ಕತೆಗಳಿಗೆ ಮಿತಿ ಸಹ ಆಯಿತು. ಶಾಂತಿನಾಥದೇಸಾಯಿ ಅವರ "ಕ್ಷಿತಿಜ" ಕತೆ ಇದಕ್ಕೆ ಉದಾಹರಣೆ ಮಂದಾಕಿನಿ ತನ್ನ ಪ್ರಜ್ಞೆಯ ಕ್ಷಿತಿಜ ವಿಸ್ತರಿಸಿಕೊಳ್ಳುತ್ತಾಳೆ ಎಂಬ ಒಂದೇ ಸಾಲನ್ನು ಹೇಳಲು ಅವರು ಶ್ರಮಿಸಿರುವ ರೀತಿ ದಯನೀಯವಾಗಿದೆ. ಇಂತಹ ಅನಗತ್ಯ ಸಂಕೀರ್ಣತೆ ಓದುಗರ ವಲಯವನ್ನು ಕ್ಷೀಣಿಸುವಂತೆ ಮಾಡಿತು. ಆದರೆ ಇದು ಜನಪ್ರಿಯ ಪತ್ರಿಕೆಗಳ ಮಟ್ಟಿಗೆ ವರದಾನವಾಯಿತು. ಇಂತಹ ಕತೆಗಳಿಗೆ ಮುಖತಿರುಹಿದ ಓದುಗರಿಗೆ ಬರೆಯಲು ಹೊಸ ಮಾದರಿ ಕತೆಗಾರರು ಹುಟ್ಟಿಕೊಂಡರು. ಪತ್ರಿಕೆಗಳಿಗೆ ಬರೆದ ತಪ್ಪಿಗೆ ವಿಮರ್ಶಕರ ಕಣ್ಣಿಗೆ ಅವರು ಅಪರಾಧಿಗಳಾಗಿ ಕಾಣಿಸಿಕೊಂಡರು. ಆದರೆ ನಾ. ಡಿಸೋಜ, ಎನ್. ಎಸ್. ಚಿದಂಬರರಾವ್, ಈಶ್ವರಚಂದ್ರ ನೀಡಿದ ಕೆಲಕತೆಗಳು ಸುಲಭಕ್ಕೆ ನಿರ್ಲಕ್ಷಿಸಬಾರದವು. ನಾ. ಡಿಸೋಜರ "ಅಮರ ಪ್ರೇಮವೆಂಬ ಹುಚ್ಚು ಕನಸು" ಒಂದು ವಿಶಿಷ್ಟಕತೆ. ಇದರ ಉತ್ತರಾರ್ಧ ವಿಫಲ ಪ್ರೇಮದಿಂದ ಆತ್ಮಹತ್ಯೆ ಮಾಡಿಕೊಳ್ಳಲು ಸಿದ್ದರಾಗಿದ್ದ ಪ್ರೇಮಿಗಳು ಮತ್ತೆ ಬದುಕಿಗೆ ಹಿಂತಿರುವ ಬದಲಾದ ಚಿತ್ರ ಹೊಂದಿದೆ. ಸಿದ್ಧಮಾದರಿಯನ್ನು ಜನಪ್ರಿಯ ಲೇಖಕರೇ ಬದಲಾಯಿಸುವುದು ಕುತೂಹಲದ ಸಂಗತಿ. "ಕನ್ನಡಿ" ಮತ್ತು "ತರ್ಕಶಾಸ್ತ್ರ" ಎಂಬ ಎರಡು ಕತೆಗಳಲ್ಲಿ ವಿಭಿನ್ನ ಮಾದರಿ ತಂತ್ರಗಾರಿಕೆ ಮೆರೆದ ಎನ್ ಎಸ್. ಚಿದಂಬರರಾವ್ ಸರಳವಾದರೂ ಕ್ಲೀಷೆಯಾಗದ ಕತೆಗಳನ್ನು ಕೊಟ್ಟ ವಿಶಿಷ್ಟ ಕತೆಗಾರ. ಸಣ್ಣಕತೆಗಳ ಇನ್ನೊಂದು ನೆಲೆಯಿಂದ ಬರೆಯುವ ಜನಪ್ರಿಯ ಲೇಖಕರೂ ಮಹತ್ವದ ಕೊಡುಗೆ ನೀಡಬಲ್ಲರೆಂದು ಇವರ ಕತೆಗಳು ಹೇಳುತ್ತವೆ.

೩

ಸುಶಿಕ್ಷಿತರ ಬೌದ್ಧಿಕ ಕಸರತ್ತು ಎಂಬ ಅಪಾದನೆಗೆ ಗುರಿಯಾಗಿದ್ದ ಸಣ್ಣಕತೆಗೆ ಹೊಸ ದಾರಿ ಕಾಣುವ ಯತ್ನ ಎಪ್ಪತ್ತರ ದಶಕದಲ್ಲೇ ಆರಂಭವಾಗಿತ್ತು. "ತೇಜಸ್ವಿ" ಅವರ "ಅಬಚೂರಿನ ಪೋಸ್ಟಾಫೀಸು" ಸಂಕಲನದಲ್ಲಿ ಬರೆದುಕೊಂಡ ಮುನ್ನುಡಿಯನ್ನು ಇದಕ್ಕೆ ಗಮನಿಸಬಹುದು. ತಂತ್ರಕ್ಕಿಂತ ದ್ರವ್ಯ ಹಿರಿದು ಎಂಬುದನ್ನು ತಮ್ಮ ಕತೆಗಳಲ್ಲೇ ತೇಜಸ್ವಿ ತೋರಿಸಿಕೊಟ್ಟರು. "ತಬರನ ಕತೆ" ಇದಕ್ಕೆ ಉಜ್ವಲ ನಿದರ್ಶನ. ಇಂತಹುದೇ

ಪ್ರಯೋಗ ಸಾಧಿಸಿದ ದೇವನೂರ ಮಹಾದೇವ ನಂತರದ ದಿನಗಳಲ್ಲಿ ತಂತ್ರಗಾರಿಕೆ ಗೋಜಲಿಗೆ ಸಿಕ್ಕಿಕೊಂಡರು. ಬೆಸಗರಳ್ಳಿ ರಾಮಣ್ಣ ಸರಳ ನೇರವಾಗಿ ಕತೆ ಹೇಳಲು ಶ್ರಮಿಸಿ ಅಲ್ಲಲ್ಲಿ ಗೆದ್ದವರು. "ಗಾಂಧಿ" ವಾಚ್ಯವಾಗದೆ ಶೋಷಣೆ ಬಗ್ಗೆ ಬರವಣಿಗೆ ಸಾಧ್ಯ ಎಂದು ತೋರಿಸಿಕೊಟ್ಟ ಕತೆ. ಆದರೆ ಈ ಸಂಯಮ ಬಂಡಾಯದ ಹೆಚ್ಚಿನ ಕತೆಗಾರರಲ್ಲಿ ಕಾಣುವುದಿಲ್ಲ. ಅರಚಾಟದಲ್ಲೇ ಕುಂ. ವೀರಭದ್ರಪ್ಪ ಸೋತರೆ ಏನನ್ನು ಹೇಳಬೇಕು ಎಂದು ಹುಡುಕುವುದರಲ್ಲೇ ಕಾಳೇಗೌಡ ನಾಗವಾರ ಸೋಲುತ್ತಾರೆ.

ಮತ್ತೆ ಹಿಂದಕ್ಕೆ ಸಂವೇದನೆ ಸಾಗಿಸುವ ಕುರಿತು ರಾಮಚಂದ್ರದೇವ ಮಾತನಾಡ ಲಾರಂಭಿಸಿದ್ದು ಕೇಂದ್ರ ಪಲ್ಲಟದ ಆಶೆಯನ್ನು ಹುಟ್ಟಿಸಿತು. ಆದರೆ ವಾಸ್ತವವಲ್ಲದನ್ನೆಲ್ಲ ಫ್ಯಾಂಟಸಿ ಎಂಬ ಸಮೀಕರಣದಿಂದ ಓದುವುದು ಕನ್ನಡದ ಮಟ್ಟಿಗಂತು ಸಾಧ್ಯವಿಲ್ಲದ ಮಾತು. ಕಥೆ ಹೇಳುವ ರೀತಿಯಲ್ಲಿ ದೇವ ಬದಲಾವಣೆ ಬಯಸಿದರೆ, ವೈದೇಹಿ ಕತೆಯ ವಸ್ತುವಲ್ಲೇ ಬದಲಾವಣೆ ಬಯಸುತ್ತಾರೆ. ಎಂ. ಎಸ್. ಕೆ. ಪ್ರಭು ಅತಿ ರಂಜನೆಯನ್ನೇ ಫ್ಯಾಂಟಸಿ ಎಂದು ತೃಪ್ತರಾಗುತ್ತಾರೆ ಇವರನ್ನೆಲ್ಲ ಒಂದೇ ಸಿದ್ಧಾಂತದಲ್ಲಿ ಹೇಳುವು ದಾದರೂ ಹೇಗೆ ? ಇಂತಹದೇ ಸಮಸ್ಯೆ ಮಹಿಳಾ ಕತೆಗಾರ್ತಿಯರ ಬಗೆಗೂ ಬರುತ್ತದೆ. ಎಂಬತ್ತರ ದಶಕದಲ್ಲಿ ಗಮನಾರ್ಹ ಸಂಖ್ಯೆಯಲ್ಲಿ ಕಾಣಿಸಿಕೊಂಡಿದ್ದರೂ ಆ ಪರಂಪರೆ ಆರಂಭ ಕೊಡಗಿನ ಗೌರಮ್ಮನವರಿಂದಲೂ ಇದೆ. ಇವರಲ್ಲಿ ಜನಪ್ರಿಯ ಕತೆಗಾರ್ತಿಯರದು ಒಂದು ಮಗ್ಗುಲಾದರೆ ಕಲಾತ್ಮಕತೆ ದುಡಿಸಿಕೊಳ್ಳಲು ಯತ್ನಿಸಿದ ಕತೆಗಾರ್ತಿಯರದು ಇನ್ನೊಂದು ಮಗ್ಗಲು. ಶೋಷಣೆ ಬಂಡಾಯ ಇತ್ಯಾದಿ ಶಬ್ದದಲ್ಲಿ ಸಿಕ್ಕ ವೀಣಾ ಶಾಂತೇಶ್ವರ ಒಂದು ಕಡೆಯಿದ್ದರೆ, ಆ ಶಬ್ದ ಬಳಸದೆ ಅದನ್ನೆಲ್ಲ ಹೇಳಿದ ನೇಮಿಚಂದ್ರ ಇನ್ನೊಂದು ಮಗ್ಗಲು. ಮಹಿಳೆಯರು ಬರೆದದ್ದು ಎಂದ ಮಾತ್ರಕ್ಕೇ ಗ್ರಹಿಕೆ ಬೇರೆಯಾಗಿಸಬೇಕೆ ಎಂಬ ಪ್ರಶ್ನೆ ಕೂಡ ಇಲ್ಲಿ ಬರುತ್ತದೆ. ಇದೇ ಹಂತದಲ್ಲಿ ಪತ್ರಿಕೆಗಳಿಗೆ ಬರೆಯಲು ಆರಂಭಿಸಿದರೂ ರಂಜನೆ ಬಿಟ್ಟು ಶೋಧನೆಗಳಿಗೆ ತಮ್ಮನ್ನು ತೆರೆದುಕೊಂಡರು ಎಸ್. ಸುಶೀಲ ಚಿಂತಾಮಣಿ ಇದಕ್ಕೆ ಉತ್ತಮ ಉದಾಹರಣೆ, ಇಂದ್ರಿಯಗಳ ಗ್ರಹಿಕೆಯನ್ನೇ ಪ್ರಶ್ನಿಸುವ ಮಹತ್ವದ ಕತೆಗಳನ್ನು ಅವರು ನೀಡಿದ್ದಾರೆ. ಇಂತಹದೇ ಶೋಧನೆ ಮಾಡಿದವರಲ್ಲಿ ಎಂ. ವ್ಯಾಸ ಕೂಡ ಒಬ್ಬರು. ಕತೆ ಆಕೃತಿಯನ್ನೆ ಪುನರ್ರಚಿಸುವವರೆಗೆ ಅವರ ಆಸಕ್ತಿ ಬೆಳೆದಿದ್ದು ಇದೆ. ನಾಗತಿಹಳ್ಳಿ ಚಂದ್ರಶೇಖರ್ ಭಾಷೆ ಮೇಲೆ ಅಪಾರ ಹಿಡಿತ ಸಾಧಿಸಿದವರು. ಕಥೆ ಹುಟ್ಟುವ ಕ್ರಮಕ್ಕೆ ಭಾಷೆಯ ಸಂಪತ್ತು ಸುರಿದು ತಮ್ಮ ಜಾಣತನದಿಂದ ಅವರು ಸೋತಿದ್ದು ಇದೆ. ಟಿ. ಆರ್. ರಾಧಾಕೃಷ್ಣ, ಡಾ. ಸಂಜೀವ ಬೇಳೂರ, ಗಂಗಾ ಪಾದೇಕಲ್, ಸಾರಾ ಅಬೂಬಕರ್, ರವಿ ಬೆಳಗೆರೆ ಇಂತಹ ಪ್ರಯೋಗ ಮಾಡಿದ ಇತರ ಕತೆಗಾರರು.

೪

ಹೊಸ ಪೀಳಿಗೆ ಕತೆಗಾರರ ಸವಾಲುಗಳು ಪರಂಪರೆ ಮತ್ತು ವರ್ತಮಾನಗಳೆರಡರಲ್ಲೂ ಅಡಗಿರುವುದರಿಂದ ಅಭಿವ್ಯಕ್ತಿಯ ನೆಲೆಗಳು ಭಿನ್ನವಾಗಿವೆ. ಹೆಜ್ಜೆ ಮೂಡಿದ ದಾರಿಗಿಂತ ಬೇರೆಯಾಗಿ ಬರೆಯಲು ಶ್ರಮಿಸುತ್ತಿರುವ ಎಂ. ಎಸ್. ಶ್ರೀರಾಂ, ವಿವೇಕ ಶ್ಯಾನುಭಾಗ್, ಕೇಶವ ಮಳಗಿ ಮಾಧ್ಯಮಕ್ಕೆ ಹೊಸ ತಿರುವು ನೀಡಬಲ್ಲ ಭರವಸೆ ಮೂಡಿಸುತ್ತಿದ್ದಾರೆ. ಎಂ. ಎಸ್. ಶ್ರೀರಾಂ ಕಥನ ಕಲೆ ಕುರಿತು ಎಚ್ಚರ ವಹಿಸಬೇಕು. "ಮಾಯಾದರ್ಪಣ" ಸಂಕಲನದ "ಟಿಕ್ ಟಿಕ್ ಟಿಕ್ ಟಿಕ್ ! ಓಹ್ ! ಗಡಿಯಾರ" ಕತೆ ಬಿಟ್ಟರೆ ಅವರ ಹೆಚ್ಚಿನ ಕತೆಗಳಲ್ಲಿ ಈ ದೌರ್ಬಲ್ಯ ಎದ್ದು ಕಾಣುತ್ತದೆ. ವಿವೇಕಶಾನಭಾಗ್‌ರ ಕತೆಗಳು ತನ್ನ ಗ್ರಹಿಕೆಯ ಸೂಕ್ಷ್ಮತೆಯಿಂದ ಗಮನ ಸೆಳೆದರೆ, ಕತೆ ಹೇಳುವ ರೀತಿಗೆ ಕೇಶವ ಮಳಗಿ ಮುಖ್ಯರಾಗುತ್ತಾರೆ. ವಸ್ತುವಿನ ನಿರ್ವಹಣೆಯಲ್ಲಿ ಹೊಸತನ ತೋರಿಸಿದ ಕೆ. ಆರ್. ವಿದ್ಯಾಧರ್ ಗಮನಾರ್ಹ ಕತೆಗಾರ, ಕೇಶವರೆಡ್ಡಿ ಹಂದ್ರಾಳ ಕೂಡಾ ಇದೇ ಕಾರಣಕ್ಕಾಗಿ ಮುಖ್ಯರಾಗುತ್ತಾರೆ. ಇವರೆಲ್ಲರ ಮುಖ್ಯ ಸಮಸ್ಯೆ ಎಂದರೆ ಮಹತ್ವಾಕಾಂಕ್ಷೆಯದು, ಮಾಧ್ಯಮದ ಪೂರ್ಣ ಸಾಧ್ಯತೆಯನ್ನು ಬಳಸಿಕೊಳ್ಳುವ ಕಡೆ ಗಮನ ಹರಿಸದಿರುವುದು. ಪರಂಪರೆ ದೃಷ್ಟಿಯಿಂದ ನಿರಾಶೆ ಹುಟ್ಟಿಸುವ ಬೆಳವಣಿಗೆ. ಈ ಕಾರಣಕ್ಕಾಗಿ ಮೊಗಳ್ಳಿ ಗಣೇಶ ಭಿನ್ನವಾಗಿ ಕಾಣುತ್ತಾರೆ. ಕನ್ನಡಕ್ಕೆ ಹೊಸದಾದ ಅನುಭವ ಪ್ರಪಂಚದಿಂದ ಸಂವೇದನೆ ದಾಖಲಿಸುವ ಪ್ರಯತ್ನ ಮಾಡುವ ಇವರು, ಪದೇ ಪದೇ ಪುನರಾವರ್ತಿತವಾಗುವ ಪ್ರಬಂಧ ಗುಣಗಳನ್ನು ಕತೆಯಿಂದ ಬೇರ್ಪಡಿಸಿದರೆ ಮಹತ್ವಾಕಾಂಕ್ಷೆ ಪೂರ್ಣ ಪ್ರಮಾಣದಲ್ಲಿ ಅರಳುತ್ತದೆ. ವೆಂಕಟ್ರಮಣಗೌಡ ಕೂಡ ಇಂತಹದೇ ಅನುಭವ ಪ್ರಪಂಚದ ಸಂಪತ್ತಿರುವ ಕತೆಗಾರ, ಅವರ ಸಮಸ್ಯೆ ಇರುವುದು ಕತೆಯ ಆಕೃತಿಯಲ್ಲಿ ವಸ್ತು ವಿನ್ಯಾಸದಲ್ಲಿ ಇವುಗಳ ಸಮನ್ವಯ ಸಾಧಿಸಿದ ದಿನ ಕನ್ನಡಕ್ಕೆ ಅವರಿಂದ ಶ್ರೇಷ್ಠ ಕತೆಗಳು ದೊರೆಯಬಲ್ಲವು. ಹೀಗೆ ಮುಸ್ಲಿಂ ಸಂವೇದನೆ ಹಿನ್ನೆಲೆ ಹೊಂದಿರುವ ಅಬ್ದುಲ್ ರಶೀದ್, ಬಾನು ಮುಷ್ತಾಕ್ ಹೊಸ ಸಂವೇದನೆಗಳನ್ನು ಕನ್ನಡಕ್ಕೆ ತೆರೆದಿಡುತ್ತಿದ್ದಾರೆ. ಹೊಸ ಬದುಕಿನ ಕ್ರಮ ಹೇಳುತ್ತಿದ್ದೇವೆ ಎಂಬ ಹಿಂಜರಿಕೆ, ತಮ್ಮ ಜನಾಂಗವನ್ನು ಮೆಚ್ಚಿಸಲು ಬರೆಯುತ್ತಿದ್ದೇವೆ ಎಂಬ ಭಯ ಆರಂಭಿಕ ಹಂತದಲ್ಲಿ ಕಾಣಿಸಿಕೊಳ್ಳುತ್ತಿದ್ದರೂ ಕಾಲಕ್ರಮೇಣ ಇದರಿಂದ ಇವರ ಕತೆಗಳು ಮುಕ್ತವಾದವು.

ಇನ್ನೊಂದು ಮಗ್ಗಲಿನ ಕತೆಗಾರರ ಸಮಸ್ಯೆ ತಮ್ಮ ನೆಲೆಯನ್ನು ಕಂಡುಕೊಳ್ಳುವ ಬಗೆಗಿನದು. ಮೌನದ ಆಳ ಪಾತಾಳದಿಂದ ಅನುಭವ ದಾಖಲಿಸುವ ಮಹಾಬಲಮೂರ್ತಿ ಕೊಡ್ಲೆಕೆರೆ ಚಿತ್ತಾಲರ ತೆಕ್ಕೆಯಿಂದ ಹೊರಬರಲು ಒದ್ದಾಡುತ್ತಿದ್ದರೆ, ನಟರಾಜ್ ಹುಳಿಯಾರ್ "ನೆತ್ತರು ಮತ್ತು ಗುಲಾಬಿ"ಯಲ್ಲಿ ತೋರಿಸಿದ ಸ್ವಂತಿಕೆಯನ್ನು ಉಳಿದ

ಕತೆಗೂ ವಿಸ್ತರಿಸಲು ವಿಫಲರಾಗುತ್ತಿದ್ದಾರೆ. ಕುಮಾರ ಜೋಷಿ "ಸಿಸ್ಟರ್ ಮಿರಾಂಡಳ ಕಪ್ಪು ರವಿವಾರ"ದಿಂದ ಗಮನ ಸೆಳೆದರೂ ಇನ್ನೂ ಪೂರ್ಣವಾಗಿ ತಮ್ಮ ನೆಲೆಯನ್ನು ಕಂಡುಕೊಂಡಿಲ್ಲ. ಅಮರೇಶ್ ನುಗಡೋಣಿ ತಮ್ಮ ಮಹತ್ವಾಕಾಂಕ್ಷೆಗೆ ನೆಲೆ ಹುಡುಕುತ್ತಿದ್ದಾರೆ ಭರವಸೆ ಕತೆಗಳನ್ನು ಬರೆಯಬಲ್ಲ ತಮ್ಮ ಶಕ್ತಿಯನ್ನು ಡಿ. ಅರವಿಂದ ಭದ್ರಾವತಿ "ರಂಜಕತೆ"ಯ ಮೋಹಕ್ಕೆ ವ್ಯರ್ಥಗೊಳಿಸುತ್ತಿದ್ದಾರೆ. "ಪ್ರೀತಿ" ಮತ್ತು "ಸಾವು" ನೆಲೆಯಲ್ಲಿ ಕತೆ ಹೇಳುವ ಎಂ. ಎಸ್. ವೇದ ಅವರದು ಪೂರ್ಣ ಸಾಫಲ್ಯಕ್ಕೆ ಬೇಕಾದ ರೂಪದ ಬಗೆಗಿನ ನಿರ್ಲಕ್ಷೆಯ ಸಮಸ್ಯೆ.

ಈ ಎರಡು ಮಗ್ಗಲಿನ ಕತೆಗಾರರು ತಮ್ಮ ದಿಕ್ಕನ್ನು ಕಂಡುಕೊಳ್ಳುವ ಕಡೆ ಕನ್ನಡ ಕಥಾ ಪರಂಪರೆಯ ಭವಿಷ್ಯವನ್ನು ನಿರ್ಧರಿಸುತ್ತದೆ. ಈ ವರ್ತಮಾನದ ಕತೆಗಾರರ ಜೊತೆ ಹಿಂದಿನ ತಲೆಮಾರಿನ ಕತೆಗಾರರು ಬರೆಯುತ್ತಿದ್ದಾರೆ. ಕವಿತೆ ಕಾದಂಬರಿಗೆ ಗಮನಿಸಿದರೆ ಕಥಾಮಾಧ್ಯಮದ ವೈವಿಧ್ಯತೆ ಕಡಿಮೆಯಾದರು ಮಾಧ್ಯಮ ಪಡೆದುಕೊಳ್ಳುತ್ತಾ ಬಂದ ತಿರುವುಗಳು ಅಚ್ಚರಿ ಹುಟ್ಟಿಸುವಂಥವುಗಳು. ಪ್ರತಿ ಲೇಖಕರ ವೈಯಕ್ತಿಕ ಸೋಲು ಗೆಲುವಿನ ಬದಲು ಪ್ರತಿ ಹಂತದ ಸ್ವರೂಪದ ಕುರಿತು ಅಧ್ಯಯನ ಮಾಡಬೇಕೆಂದು ನಿರ್ಧರಿಸಲು ಇದೇ ಕಾರಣ. ಜೊತೆಗೆ ಕರಾರುವಕ್ಕಾಗಿ ಗೆರೆ ಎಳೆದು ಇತಿಹಾಸದಂತೆ "ಚಳುವಳಿ" ನೆಪದಲ್ಲಿ ಬರಹಗಾರರನ್ನು ಬೇರ್ಪಡಿಸಿ ಓದುವ "ಅಕಾಡೆಮಿಕ್" ಕುರುಡುಗಣ್ಣಿನ ಅಪಾಯವನ್ನು ಮೀರಲು ಪ್ರಯತ್ನಿಸಿದ್ದೇನೆ.

ಇಷ್ಟಾದರೂ ಹೇಳಿದಕ್ಕಿಂತ ಹೇಳದ್ದು ಹೆಚ್ಚಿದೆ ಎಂಬ ಅರಿವು ನನಗಿದೆ. ಶರಧಿ ನೀರನ್ನು ಹಿಡಿಯುವ ಪಾತ್ರೆ ಸಿಕ್ಕುವವರೆಗೆ ಈ ಅಪಾಯ ತಪ್ಪಿದ್ದಲ್ಲವೇನೂ.



**ಗಮನಿಸಿದ ಬರಹಗಳು**

ಕನ್ನಡ ಸಣ್ಣಕತೆ : ಒಲವು ನಿಲುವುಗಳು
(ಪು 46, ಅನಿವಾರ್ಯ—ಜಿ. ಎಚ್. ನಾಯಕ್)
ಮತ್ತೆ ಹಿಂದಕ್ಕೆ—ರಾಮಚಂದ್ರದೇವ
(ಪು 47, ಸಂವಾದ ಸಂಚಿಕೆ 7)
ಮಹತ್ವದ ಸಾಹಿತಿಯ ಮಾಧ್ಯಮವಾಗಿ ಸಣ್ಣಕತೆ
(ಕನ್ನಡ ಭಾರತಿ ಆಗಸ್ಟ್ 92) —ಕೀರ್ತಿನಾಥ ಕುರ್ತಕೋಟಿ
ಎಂಬತ್ತರ ದಶಕದ ಸಣ್ಣಕತೆ : ಹಲವು ಪ್ರತಿಕ್ರಿಯೆಗಳು
(ಸುಧಾ ಯುಗಾದಿ ವಿಶೇಷಾಂಕ 92)

# ದಿ. ಕೆ. ವೆಂಕಟೇಶ್‌ರ ಶಬ್ದಗಳು....

ವಾಸುದೇವ ನಾಡಿಗ್

ಬರಹಗಾರ ತನ್ನ ಅಭಿವ್ಯಕ್ತತೆಯಲ್ಲಿ ತಾಜಾತನ ಉಳಿಸಿಕೊಳ್ಳಬೇಕಾದುದು ಅಗತ್ಯ. ಹಾಗೆಂದೇ ಇಂತಹ ತಾಜಾತನದ ಹಂಬಲಕ್ಕಾಗಿ ಬರಹವನ್ನು ವೃಥಾ ಪ್ರಯೋಗಕ್ಕೆ ಎಡೆ ಮಾಡಿದರೆ ಅಪಾಯಕಾರಿಯೂ ಹೌದು. ಆದ್ದರಿಂದಲೇ ಬರಹದ ಮಾದರಿ ಅಥವಾ ಪ್ರಕಾರವೊಂದರ ಪರಂಪರೆ ಮತ್ತು ವರ್ತಮಾನದ ಮಧ್ಯೆ 'ಪ್ರಯೋಗ' ಎಂಬ ಮಾತನ್ನು ಎಚ್ಚರದಿಂದಲೇ ವಿಶ್ಲೇಷಿಸಬೇಕು. ಬರಹಗಾರ ತನ್ನ ವಸ್ತು ಮತ್ತು ಅಭಿವ್ಯಕ್ತಿಯ ಮಧ್ಯೆ ಭಾಷಿಕವಾಗಿ ಸಾಧಿಸುವ ಹೊಸಕ್ರಮದಲ್ಲಿ ಸಹಜತೆಯನ್ನು ಹುಡುಕುವ ಕೆಲಸ ಇಲ್ಲಿಂದಲೇ ಆರಂಭವಾಗುತ್ತದೆ. ಈ ಸಹಜತೆಯನ್ನು ಹುಡುಕುವ ಕೆಲಸ ಇಲ್ಲಿಂದಲೇ ಆರಂಭವಾಗುತ್ತದೆ. ಈ ಸಹಜತೆಯನ್ನು ರೂಢಿಸಿ ಕೊಳ್ಳುವುದು ಬರಹಗಾರನ ಆಂತರಿಕ ಗುಣ ಹಾಗೂ ಬರಹದ ಸಾಂದರ್ಭಿಕ ಗುಣ.

'ನವ್ಯ' ಸಂದರ್ಭದಲ್ಲಿ ಪ್ರಯೋಗಗಳೇ ಜಾಸ್ತಿ. ಪ್ರಯೋಗದ ಖಯಾಲಿ ಹಿಡಿದ ಬರಹಗಾರನ ಕೃತಿ ಹೆಚ್ಚು ಕಾಲ ಬದುಕಲಾರದೇನೋ ಎಂಬ ಸತ್ಯ ಗೊತ್ತಾದುದು ಈ ಕಾಲದಲ್ಲೇ. ಹಾಗಾಗಿ ಈ ಸಂದರ್ಭದ ಬಹುತೇಕ ಬರಹಗಳು ಸಾಹಿತ್ಯಾಭ್ಯಾಸ, ಓದುವ ಕ್ರಿಯೆ ಹಾಗೂ ಸಂವಹನದ ದೃಷ್ಟಿಂದ 'ಪ್ರಯೋಗ'ಗಳಾಗಿ"ಪರಿಚಿತವಾದು"ವೇ ಹೊರತು ಸಹಜ (ಕಲಾತ್ಮಕ) ಅಭಿವ್ಯಕ್ತತೆಯಿಂದ "ಆತ್ಮೀಯ"ವಾಗಲೇ ಇಲ್ಲ.

"ಕನ್ನಡ ಸಣ್ಣಕತೆ...ವರ್ತಮಾನದ ತಟ್ಟು ತುದಿಗೆ ಬಂದು ನಿಂತಾಗ ಪುಟ್ಟ ಕಥಾಸಂಕಲನ "ಇನ್ನು ಮುಂದೆ ಶಬ್ದವಿಲ್ಲ" ಕಣ್ಣಿಗೆ ಬೀಳುತ್ತದೆ. ಇಲ್ಲಿನ ಕಥೆಗಳ ಧಾಟಿ ಒಮ್ಮೆ ಪ್ರಯೋಗಗಳ ಫಲವೇನೋ ಎಂಬ ಅನುಮಾನ ಹುಟ್ಟಿಸುತ್ತದೆ. ಆದರೆ ಪ್ರಯೋಗವನ್ನು ಗೌಣವಾಗಿಸಿ ಸಹಜ ತಾಜಾತನ ದೊರಕಿಸಿಕೊಡುವುದು ಅದರ ಅನುಭವ ಖಾಚಿತ್ಯದಿಂದ ಲೇಖಕ ತನ್ನ ಬದುಕಿನೊಂದಿಗೆ, ಸುತ್ತಲಿನ ಬದುಕಿನೊಂದಿಗೆ, ಇಟ್ಟುಕೊಂಡ ಆಪ್ತತೆಯಿಂದ. "ಇನ್ನು ಮುಂದೆ ಶಬ್ದವಿಲ್ಲ"ದ ಮೂಲಕ ಒಂದಿಷ್ಟು ಶಬ್ದಗಳನ್ನು ಬಿಟ್ಟು ಹೋದ (ಶಬ್ದಗಳು ಎಂದರೆ wordsಎಂಬ ಅರ್ಥದಲ್ಲಿ ಅಲ್ಲ; ಅರ್ಥಪೂರ್ಣ ಧ್ವನಿಗಳು ಎಂದು) ಕೆ. ವೆಂಕಟೇಶ್ ಸಣ್ಣಕತೆಯ ಖಚಿತತೆಯನ್ನು ಗ್ರಹಿಸಿದ್ದ ಲೇಖಕ.

ಸಣ್ಣ ಕತೆಯಂತಹ ಮಾಧ್ಯಮದ ಮೂಲಕ ವೆಂಕಟೇಶ್‌ರ ಬದುಕಿನ ಗ್ರಹಿಕೆ ತೀಕ್ಷ್ಣವಾದ್ದು, ಅಚ್ಚರಿ ಹುಟ್ಟಿಸುವಂತಹುದು. ಅಮೂರ್ತ ಅನುಭವ, ಸಂವೇದನೆ 'ತಕ್ಕ' ಶಬ್ದಗಳಲ್ಲಿ ಹಿಡಿಯಲಾರೆನೇನೋ ಎಂಬ ಅನುಮಾನದಿಂದ ಲೇಖಕ ಆರಂಭಿಸಿದರೂ, ಹೀಗೇ ಸಾಧಿಸಿಬಿಡುವ ಪರಿಣಾಮ ಒಂದು Totalityಯನ್ನು ತನ್ನ ಪಾಡಿಗೆ ತಾನು ಪಡೆದುಕೊಂಡಿರುತ್ತದೆ ! ಇಲ್ಲಿ. ಎ. ಕೆ. ರಾಮಾನುಜನ್‌ರ ಕಾವ್ಯದ ಸಂದರ್ಭದ ಹಾಗೆ ವೇಗವಾದ ಓದನ್ನು ಅಪೇಕ್ಷಿಸಿ, ತೀಕ್ಷ್ಣವಾದ ಗ್ರಹಿಕೆಯನ್ನು ದಕ್ಕಿಸಿಕೊಡುವ ವೆಂಕಟೇಶರ ಕತೆಗಳಲ್ಲಿ ಚುರುಕುತನವಿದೆ.

ಯಾವ ವಿಷಯವನ್ನೂ ಹೆಚ್ಚು ವಿಸ್ತರಿಸಲು, ಹೋಗದ ಇಲ್ಲಿನ ಬರಹದ ಕ್ರಮ ನಿಶ್ಯಬ್ದತೆಯದು. ಘಟಿಸಿಹೋದ ಘಟನೆ, ಹಾಯ್ದುಹೋದ ಭಾವ–ಸಂವೇದನೆಗಳ ವೇಗವನ್ನು ಸಂಕ್ಷಿಪ್ತತೆಯಲ್ಲಿ ಹಿಡಿದು ನಿಲ್ಲಿಸುವುದು ಇಲ್ಲಿನ ಮುಖ್ಯ ಗುಣ. 'ಮಂಚ' ಈ ದೃಷ್ಟಿಯಿಂದ ಸಂಕಲನದ ಮಹತ್ವದ ಕತೆ ಎನ್ನಿಸುತ್ತದೆ. ಪುಟ್ಟ ಹುಡುಗನ ಮಾನಸಿಕ ಆಂದೋಲನವನ್ನು ಅದರ ಚಲನೆಗೆ ತಕ್ಕ ರೀತಿಯಲ್ಲಿ ಭಾಷಿಕವಾಗಿ ಅಭಿವ್ಯಕ್ತಿಸುವ ಕಲೆಗಾರಿಕೆ ಇಲ್ಲಿದೆ.

ವೆಂಕಟೇಶ್ ವಸ್ತುವೊಂದರ ಶೋಧದಲ್ಲಿ ಕಾಲ ಕಳೆಯದೇ ತಮ್ಮ ಬದುಕಿನ ಮಿತ ಪರಿಧಿಯನ್ನು ಬಳಸಿಕೊಂಡೇ ತೃಪ್ತರಾಗುವ, ಖುಷಿ ಪಡುವ ಬಗೆ ಇಲ್ಲಿ ಕಾಣುತ್ತದೆ. ಬಾಲ್ಯ, ಗೆಳೆತನ, ಯೌವನ, ಕಾಲೇಜಿನ ತುಂಟತನ, ಭ್ರಮೆ, ಹುಚ್ಚು ಕನಸು ಕೊನೆಗೆ ಅರ್ಥಕ್ಕೆ ಸಿಗದ ವಾಸ್ತವ ಇವೆಲ್ಲವನ್ನೂ ಗ್ರಹಿಸುವ ಕ್ರಮ ತುಂಬಾ ಅಚ್ಚುಕಟ್ಟಿನದು. ಸಣ್ಣಕತೆ ಸಾಧಿಸಬಹುದಾದ ಚೊಕ್ಕತನ ಹಾಗೂ ಪರಿಣಾಮವನ್ನು ಗಮನದಲ್ಲಿಟ್ಟುಕೊಂಡಂತೇ ವೆಂಕಟೇಶ್ ಮುಂದುವರೆದಂತಿದೆ......

'ಎಲ್ಲಾ ಸೇರಿ ಹೊಡೆದದ್ದು' ಮತ್ತು 'ಮೋಸ ಮಾಡಿಕೊಳ್ಳೋಣ ಬನ್ನಿ' ಎಂಬ ಎರಡು ಕಥೆಗಳಲ್ಲಿನ ಅತಿ ಸಂಕ್ಷಿಪ್ತತೆ ಅಥವಾ ಹೊಂದಿಸುವಲ್ಲಿನ ತೊಡಕು ಅನುಭವವನ್ನು ಅಪೂರ್ಣವಾಗಿಸುತ್ತದೆ. ಗ್ರಹಿಕೆಯು ಕೊನೆಯಲ್ಲಿ 'ಖಾಲಿ' ಉಳಿಯುತ್ತದೆ. ಇನ್ನುಳಿದಂತೆ ಸೂಕ್ಷ್ಮ ಸಂವೇದನಾಗುಣದ ಕುಸುರಿ ಕೆಲಸವೇ ಹೆಚ್ಚು.

'ನಿಮ್ಮ ಗೆಳತಿ' ಹಾಗೂ 'ಕತೆ ಅಲ್ವಲ್ಲ' ಕತೆಗಳಲ್ಲಿನ ಅನುಭವ ಖುಷಿ ಕೊಟ್ಟು ಮರೆತುಬಿಡಬಹುದಾದದ್ದು. 'ಕತೆ ಅಲ್ವಲ್ಲಾ' ನಿಜವಾಗಿಯೂ ವರದಿಯೊಂದರಂತೆ ಭಾಸವಾಗುತ್ತದೆ. 'ನಿಮ್ಮ ಗೆಳತಿ'ಯ ನಾಯಕಿ ಕಾದಂಬರಿಯ ಮುಜುಗರ ಪೇಚಾಟಗಳು ಸಹಜತೆಯನ್ನು ಉಳಿಸಿಕೊಳ್ಳುತ್ತವೆ.

ಬದುಕು ಹಾಗೂ ಸಾವಿನ ಬಗ್ಗೆ ಗಾಢವಾಗಿ, ತಾತ್ವಿಕವಾಗಿ, ತೀರಾ ಒಂಟಿ ಧ್ವನಿಯ ಭಾರದಲ್ಲಿ ಆಲೋಚಿಸುವಂತಿರುವ ಕತೆಗಳೇ ಹೆಚ್ಚು. ಸಾವಿನ ಬಗ್ಗೆ ಕುತೂಹಲ ಹಾಗೂ ವ್ಯಂಗ್ಯ ದೃಷ್ಟಿಯನ್ನು 'ನಾನು ಈಗ ಬಂದೆ', 'ಪೋಸ್ಟ್ ಮಾರ್ಟಮ್' ಕತೆಗಳಲ್ಲಿ ಕಾಣಬಹುದು. 'ಇದ್ದಾಗಿನ' ಮನುಷ್ಯನ ಚಹರೆಗಳೆಲ್ಲವನ್ನೂ 'ಇಲ್ಲದಾದಾಗ'

ಪರಿಷ್ಕಾರಕ್ಕೆ ಒಳಪಡಿಸುವ ಬದುಕನ್ನು ಛೇಡಿಸುವ ಗುಣವನ್ನು ಈ ಕತೆಗಳು ಒಳಗೊಂಡಿವೆ. ಬರಹಗಾರನ ಕುತೂಹಲ ಮತ್ತು ತಾಳ್ಮೆಯು ಗ್ರಹಿಕೆಯನ್ನು ವಿಶದ ಪಡಿಸುವ 'ಸಣ್ಣ ಸಂಗತಿ' ಕೊಡುವ ವಿವರ ಅದ್ಭುತವಾದದ್ದು. 'ಇರುವೆ'ಯ ಪ್ರಯತ್ನ ವೊಂದನ್ನು ನಿಷ್ಫಲಮಾಡಿಬಿಡುವ, ಕರಿಬಣ್ಣದ ಷೂಸಿನ ಮನುಷ್ಯನ ವ್ಯಕ್ತಿತ್ವದ 'ಸಣ್ಣ'ತನವನ್ನು ಹೀಗೆ ಅಭಿವ್ಯಕ್ತಿಸಿದ ಬಗೆ ಗಮನಾರ್ಹ. ಆದ್ದರಿಂದಲೇ ಮನುಷ್ಯನ ಅಸ್ತಿತ್ವವು ಇರುವೆಯ ಕ್ರಿಯಾಶೀಲತೆಯ ಮುಂದೆ 'ಸಣ್ಣ ಸಂಗತಿ'ಯಾಗಿ ಬಿಡುತ್ತದೆ.

ಒಟ್ಟಿನಲ್ಲಿ ಸಾವಿನ ಮುಂದೆ ನಿರಂತರ ನಗಲಾರದ ಹೇಗೋ ಏನೇನೋ ಬದಲಾವಣೆಗಾಗಿ ಕಾದು ಅಕ್ವೇರಿಯಾದ ಮೀನುಗಳಂತೆ ಬದುಕನ್ನು ರೂಪಿಸಿಕೊಳ್ಳುವ ಮನುಷ್ಯನ ಪಾಡುಗಳ ಬಗ್ಗೆ ಕತೆಗಾರ ವೆಂಕಟೇಶರ ಅರ್ಥಪೂರ್ಣ ವಿವೇಚನೆಯಂತಿದೆ 'ಇನ್ನು ಮುಂದೆ ಶಬ್ದವಿಲ್ಲ' ಸಾವೆಂಬ ಶಬ್ದದಿಂದ ಪಾರಾಗಲು ನಿಶ್ಯಬ್ದತೆಗಾಗಿ ಪರ ದಾಡುವ, ಕೊನೆಗೂ ಸಾವೆಂಬುದು ಶಬ್ದವೋ ನಿಶ್ಯಬ್ದವೊ ಎಂಬ ಗೊಂದಲ, ದ್ವಂದ್ವ, ಅನುತ್ತರದ ಸ್ಥಿತಿಯ ಮುಂದೆ ಮೌನವಾಗುವ ತಲ್ಲಣ ಇಲ್ಲಿ ಮನೆಮಾಡಿದೆ. ಕಿವಿಯನ್ನು ಹೇಗೆ ಮುಟ್ಟಿಕೊಂಡರೇನು ? ಶಬ್ದ, ಗದ್ದಲ, ಗೋಜು, ತಂಟೆ, ತಕರಾರು ಇಬ್ಬಂದಿ ತನದ ಸಿಡಿಲುಗಳು ನಮ್ಮೊಳಗೇ ಇವೆ. ಅವುಗಳನ್ನು ಕೇಳದಂತೆ ಇರಲು ಸಾಧ್ಯವೆ ? ಸಾಧ್ಯ. ಕೊನೆಗೆ ಮಾತ್ರ ಅದು ಪುನಃ ಸಾವೆಂಬ ಶಬ್ದದೊಳಗೆ. ಇಂತಹ ವಿಚಾರಗಳ ಸೂಕ್ಷ್ಮ ನಿರೀಕ್ಷಕ ವೆಂಕಟೇಶ್. ಇನ್ನು ಮುಂದೆ 'ವ್ಯಕ್ತಿ' ವೆಂಕಟೇಶ್ ಇಲ್ಲ, ಬದಲಾಗಿ ಕಥೆಗಳೊಳಗಿನ ಬದುಕು ಇದೆ. ಹಾಗಾದರೆ 'ಬದುಕು' ಒಂದು 'ಶಬ್ದ'. 'ಶಬ್ದ' ಎಂದರೆ ಒಂದು ಕತೆ. ವೆಂಕಟೇಶ್ ಇಂತಹ ಕತೆಗಳ ಒಳಗೇ ಬದುಕಿನ ಹಲವು ಶಬ್ದಗಳನ್ನು ಗುರುತಿಸಿಕೊಟ್ಟು ಹೋಗಿದ್ದಾರೆ. ಮತ್ತಷ್ಟು ಶಬ್ದಗಳ ಬಗ್ಗೆ ಕುತೂಹಲ ಕೆರಳಿಸಿ ; ಹೀಗೆ ಕುತೂಹಲ ಉಳಿಸಿಕೊಂಡೇ ಹೇಳಬಹುದಾದರೆ, ಕೆ. ವೆಂಕಟೇಶ್ ಇನ್ನೂ ಜೀವಂತವಿದ್ದಾರೆ !

ಪುಸ್ತಕ : **'ಇನ್ನು ಮುಂದೆ ಶಬ್ದವಿಲ್ಲ'**

ಲೇಖಕ : **ಕೆ. ವೆಂಕಟೇಶ್**

ಪ್ರಕಟಣೆ : **ಕ್ರೈಸ್ಟ್ ಕಾಲೇಜು ಕನ್ನಡ ಸಂಘ,** ಬೆಂಗಳೂರು
1992, ಬೆಲೆ : ರೂ. 15-00

○○

# ಕತೆಗಳು ಇರುತ್ತವೆ; ಕಾಣಬೇಕಷ್ಟೆ

ಕೆ. ಸತ್ಯನಾರಾಯಣ

ಗೃಹಕೃತ್ಯಕ್ಕೆ ಸಂಬಂಧಿಸಿದಂತಹ ಒಂದು ಸಂಗತಿಯನ್ನು ನಮ್ಮ ತಾಯಿ ನನಗೆ ಹೇಳುತ್ತಿದ್ದಾಗ, ನಾನು ಅನ್ಯಮನಸ್ಕನಾಗಿ ಕೇಳಿಸಿಕೊಳ್ಳುತ್ತಿದ್ದೆ. ನನ್ನ ಅನ್ಯಮನಸ್ಕತೆಯಿಂದ ನಮ್ಮ ತಾಯಿಗೆ ರೇಗಿ ಹೀಗೆಂದು ಬೈದರು. "ಏನು ಯಾವಾಗಲೂ ನಿನಗೆ ಕತೆಗಳ ಗುಂಗು. ಕತೆಗಳಿಗೇನು ಯಾವಾಗಲೂ ಇರುತ್ತವೆ. ಸಾಯೋತನಕ ಇರುತ್ತವೆ..." ಇತ್ಯಾದಿ. ನಮ್ಮ ತಾಯಿ ಆಡಿದ ಮಾತಿನ ಎಳೆಯನ್ನ ಹಿಡಿದು, ಕತೆಗಳ ರಚನೆಯನ್ನೂ ಕುರಿತು ನನ್ನ ನಿಲುವನ್ನೂ ವಿವರಿಸುತ್ತೇನೆ.

ಆಧುನಿಕತೆ, ವಿಶೇಷವಾಗಿ, ನವ್ಯತೆ ನಮ್ಮ ಕಥಾ ಸಾಹಿತ್ಯದಲ್ಲಿ ಪ್ರವೇಶಿಸಿದ ಮೇಲೆ ಕತೆಗಳೆಂದರೆ ಅದೇನೋ ವಿಶೇಷ ಪದಾರ್ಥವೆಂಬಂತೆ, ಕತೆಗಾರನೆಂದರೆ ಒಬ್ಬ ಅದ್ಭುತ ವ್ಯಕ್ತಿಯಂತೆ ಕಾಣುವ ಪರಿಪಾಠ ನಮ್ಮಲ್ಲಿ ರೂಢಿಗೆ ಬಂದಿದೆ. ಇದಕ್ಕನುಗುಣವಾಗಿ ಕತೆಗಾರರು ಕೂಡ ತಾವು ಇತರರಿಗಿಂತ ಬಹು ಭಿನ್ನರೆಂಬಂತೆ 'ಶೈಲೀಕೃತ ಹಂದರ' (Stylized ego)ನಿಂದಲೇ ವರ್ತಿಸುತ್ತಾರೆ. ನನಗೆ ಯಾವತ್ತೂ ಹಾಗನಿಸಿಲ್ಲ. ಕ್ಯಾಥರೀನ್ ಪೋರ್ಟರಳ ಪ್ರಕಾರ ಬರಹಗಾರ ಸಮಾಜದಿಂದ, ಸಮಾಜದಲ್ಲಿ ಯಾವ ವಿಶಿಷ್ಟ ಸ್ಥಾನವನ್ನು ಬೇಡಕೂಡದು. ಎಲ್ಲರಂತಿದ್ದು, ಎಲ್ಲರ ಬದುಕಿನ ಬಗ್ಗೆ ಬರೆಯುವುದನ್ನು ಓದಲು ಉಳಿದೆಲ್ಲರಿಗೂ ಆಸಕ್ತಿಯಿರುತ್ತದೆಯೇ ಹೊರತು ತಾನೊಬ್ಬ ಮಹಾ, ತಾನೊಬ್ಬ ವಿಶೇಷ ಎಂದು ಭಾವಿಸಿಕೊಂಡು ಇತರರ ಬಗ್ಗೆ 'ಧೋರಣೆ'ಯಿಂದ ಬರೆದ ಬರವಣಿಗೆಗಳನ್ನು ಉಳಿದವರು ಏಕೆ ಓದಬೇಕೆಂಬುದು ಅವಳ ಪ್ರಶ್ನೆಯಿದ್ದಂತೆ ಕಾಣುತ್ತದೆ.

ಕತೆಗಳು ಇರುತ್ತವೆ ಹಾಗೆಂದರೇನು ವಿವರಿಸಿ ಎಂದು ನೀವು ಕೇಳಿದರೆ ಸ್ವಲ್ಪ ಕಷ್ಟವೇ. ವಾತಾವರಣದಲ್ಲಿ ಗಾಳಿ ಇದೆ ಎಂದು ಹೇಳಿದಾಗ ನೀವು ಸಾಧಿಸಿ ತೋರಿಸಬೇಕಿಲ್ಲವಷ್ಟೆ. ಹಾಗೆಯೇ ಕತೆಗಳು ಕೂಡ. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಹೇಳುವುದಾದರೆ ಕತೆ, ಕತೆಗಾರಿಕೆ ಎನ್ನುವುದು ಊಟ, ನಿದ್ರೆ, ಪ್ರೀತಿ, ಮೈಥುನಗಳಷ್ಟೆ ಸಹಜವಾದ್ದು, ನೈಸರ್ಗಿಕವಾದ್ದು.

ಕತೆ ಬರೆಯುವವರು ಮಾತ್ರ ಕತೆಗಾರರೆಂದು ಪೋಸು ಕೊಟ್ಟರೆ ನನಗೆ ನಗು ಬರುತ್ತದೆ. ನಾವೆಲ್ಲರೂ ನಮ್ಮ ಬದುಕಿನ ಬಹಳ ಕಾಲವನ್ನು, ಕತೆ ಹೇಳುವುದರಲ್ಲಿ

ಕೇಳಿಸಿಕೊಂಡ ಕತೆಯನ್ನು ಇನ್ನೊಬ್ಬರಿಗೆ' ನಮ ನಮಗೆ ಬೇಕಾದ ರೀತಿಯಲ್ಲಿ ಹೇಳುವುದರಲ್ಲಿ ಕತೆ ಕೇಳಿಸಿಕೊಳ್ಳುವುದರಲ್ಲೇ ಕಳೆಯುತ್ತವೆ. ಕತೆಗಳೇ ಹೀಗೆ. ನಾವು ಎಚ್ಚರವಾಗಿದ್ದಾಗ, ನಿದ್ರೆಯಲ್ಲಿದ್ದಾಗ, ಕನಸಿನಲ್ಲಿದ್ದಾಗ, ಒಂಟಿಯಾಗಿದ್ದಾಗ, ಗುಂಪಿನಲ್ಲಿದ್ದಾಗ ಯಾವಾಗಲೂ ತಮ್ಮ ಪಾಡಿಗೆ ತಾವು ಬೆಳೆಯುತ್ತಿರುತ್ತವೆ. ಒಂದು ಉಚ್ವಾಸ, ಒಂದು ನಿಚ್ವಾಸದ ನಡುವೆ ಕಾಲ ಸರಿದು ವಯಸ್ಸಾಗುವಂತೆ ಕತೆಗಳಿಗೂ ಕೂಡ ವಯಸ್ಸಾಗಿ ಬೆಳೆಯುತ್ತಾ ಹೋಗುತ್ತವೆ.

ಮಿತ್ರರಾದ ಶ್ರೀ ಜಿ. ರಾಜಶೇಖರ್, ನನ್ನ 'ನಿಮ್ಮ ಮೊದಲ ಪ್ರೇಮ ಕತೆ' ಸಂಕಲನಕ್ಕೆ ಮುನ್ನುಡಿ ಬರೆಯುತ್ತಾ, ನಾನು ಬರೆಯುವ ಶೈಲಿಯಲ್ಲಿ ಪಕ್ಕದ ಮನೆಯುವರ ಕಷ್ಟ ಸುಖಗಳನ್ನು ಅಲ್ಪ ಸ್ವಲ್ಪ ಬದಲಾವಣೆ ಮಾಡಿ ಕತೆ ಮಾಡಿಬಿಡಬಹುದು ಎಂದು ಹೇಳಿದರು. ನನಗಿರುವ ಆಸೆ ಅದೆ. ಆದರೆ ಈ ಕೆಲಸಕ್ಕೆ ಬಹಳ ಪ್ರತಿಭೆ ಪ್ರೀತಿ ಬೇಕು. ಆಸೆಯಿದ್ದರೆ ಮಾತ್ರ ಸಾಲದು.

ಇನ್ನೊಬ್ಬ ಮನುಷ್ಯನ, ಇನ್ನೊಬ್ಬ ಮನೆಯುವರ ಕಷ್ಟವನ್ನು ನಮ್ಮದು, ನಮ್ಮದೇ ಎಂದು ತಿಳಿಯುವುದು ನಾವು ಪರಿಭಾವಿಸಿದಷ್ಟು ಸುಲಭವಲ್ಲ. ಸುಲಭವೇನು ಸಾಧ್ಯವೇ ಇಲ್ಲ ಎಂದು ನಂಬಿದವರು ನಾವು. ಅವರ ಕಷ್ಟ ಅವರಿಗೆ ನಮ್ಮ ಕಷ್ಟ ನಮಗೆ ಎಂಬ ಮಾತೇ ಇದೆಯಲ್ಲ. ಏಕೆಂದರೆ ಮನುಷ್ಯನ ಪ್ರೀತಿಸುವ ಶಕ್ತಿ ಬಹು ಸೀಮಿತವಾದ್ದು. ನಾನು, ನನ್ನ ಹೆಂಡತಿ ಮಕ್ಕಳು, ನಮ್ಮ ಜಾತಿ, ನಮ್ಮ ದೇಶ ಇವುಗಳ ಗಡಿಯಿಂದಾಚೆಗೆ ಮನುಷ್ಯ ಹೋಗಲು ನಿರಾಕರಿಸುತ್ತಾನೆ. ಏನು ಸಾಧ್ಯವೂ ಆಗುವುದಿಲ್ಲ. ಪ್ರಪಂಚದ ಬಹುತೇಕ ಮನುಷ್ಯರಿಗೂ, ಬಹುತೇಕ ಘಟನೆಗಳಿಗೂ ಏನೂ ಸಂಬಂಧವೇ ಇಲ್ಲವೆಂದು ತಿಳಿಯುವ ನಮಗೆ ಕತೆಗಳು ಹೀಗೆ ಕಾಣಿಸಿಯಾವು. ಅಂದರೆ ನೀವು ಎಷ್ಟು ಕತೆಗಳನ್ನು ಕಾಣಬಲ್ಲಿರಿ ಎಂಬುದು ನಿಮ್ಮ ಪ್ರೀತಿಸುವ ಶಕ್ತಿಯನ್ನು ನೀವು ಪ್ರಪಂಚದೊಡನೆ ಪದಾರ್ಥಗಳೊಡನೆ ಇಟ್ಟುಕೊಳ್ಳುವ ಸಂಬಂಧದ ಸ್ವರೂಪವನ್ನು ಅವಲಂಬಿಸಿದೆ. ಈ ಜಗತ್ತಿನಲ್ಲಿ ನಡೆಯುವುದಕ್ಕೆಲ್ಲ ನೀವು ಹೊಣೆಗಾರರೆಂದು ಒಪ್ಪಿಕೊಳ್ಳುವುದಾದರೆ ನಿಮ್ಮ ಪಕ್ಕದ ಮನೆಯುವರ ಕತೆಗೂ, ನಿಮ್ಮ ಕತೆಗೂ ಸಂಬಂಧವಿದೆ ಎಂದು ಒಪ್ಪಿಕೊಳ್ಳುವುದಾದರೆ ಮಾತ್ರ. ಹಾಗೆ ಒಪ್ಪಿಕೊಂಡು ವ್ಯಾಸ, ವಾಲ್ಮೀಕಿ, ಮಾಸ್ತಿ, ಟಾಲ್‌ಸ್ಟಾಯ್, ಕ್ಯಾಥರೀನ್, ಆ್ಯನ್ ಪೋರ್ಟನ್ ಅಂತಹವರು ಬರೆದದ್ದರಿಂದಲೇ ಈಗ ನಮ್ಮೆದುರಿಗೆ ಒಂದಿಷ್ಟು ಒಳ್ಳೆಯ ಕಥಾ ಸಾಹಿತ್ಯವಾದರೂ ಇದೆ. ಹಾಗಲ್ಲದೆ ಆಧುನಿಕರಂತೆ, ನವ್ಯರಂತೆ ಅವರೆಲ್ಲರೂ ಅವರವರ ಬಾಲ್ಯದ ಅನುಭವಗಳನ್ನೋ, ಅವರವರ ಜಾತಿಯ ಕಷ್ಟ ಸುಖಗಳನ್ನೋ, ಅವರವರ ಭ್ರಮೆಗಳನ್ನೋ ಮಾತ್ರವೇ ಹಿಡಿದು ಬರೆಯುತ್ತಾ ಕೂತಿದ್ದರೆ ಏನಾಗುತ್ತಿತ್ತು. ನೀವು ಊಹಿಸಿಕೊಳ್ಳಬಹುದು.

ಕತೆಗಾರರೊಬ್ಬರು ಹೇಳಿದ ಮಾತು ನೆನಸಿಕೊಂಡರೆ ಭಯವಾಗುತ್ತದೆ. ಹೇಳಬೇಕಾದ ಕತೆಗಳನ್ನು ಈಗಾಗಲೇ ಹೇಳಿಯಾಗಿದೆ. ಇನ್ನು ಹೊಸ ಕತೆಗಳೇ ಇಲ್ಲ ಎಂದು ಅಪ್ಪಣೆ ಕೊಡಿಸಿದರು ಅವರು. ಬೇರೆ ಮಾತುಗಳಲ್ಲಿ ಅವರು ಹೇಳಿದ್ದೇನಂದರೆ 'ಇನ್ನು ನಾವು ಕಾಣುವ ಅಗತ್ಯವಿಲ್ಲ'ವೆಂದು. ನಮ್ಮ ಸುತ್ತ ಮುತ್ತಲ ಪ್ರಪಂಚವನ್ನು, ಪದಾರ್ಥಗಳನ್ನು ಕಾಣದೆ, ಕಾಣಿಸದೇ ನಾವು ಬದುಕುವುದೆಂದರೆ ಆಯುಸ್ಸು ಎಂಬುದು ಒಂದು ಶಿಕ್ಷೆಯಲ್ಲದೆ ಮತ್ತೇನು.

ಇದನ್ನು ಬರೆಯುತ್ತಿರುವಾಗ ಕಣ್ಣೆದುರಿಗೆ ಬಣ್ಣ ಬಣ್ಣದ ಚಿಟ್ಟೆಗಳು ಕಾಣಿಸಿಕೊಳ್ಳುತ್ತಿವೆ. ಅವು ಪಾರ್ಥೇನಿಯಂ ಗಿಡದ ಮೇಲೆ ಕೂರುತ್ತಿವೆ. ಅದಕ್ಕೂ ನನಗೂ ಏನು ಸಂಬಂಧವೆನ್ನಲೇ ಅಥವಾ ಪಾರ್ಥೇನಿಯಂ ಗಿಡಗಳನ್ನ ಮನೆ ಸುತ್ತ ಬೆಳೆಸಿಕೊಂಡು ಆದಕ್ಕೂ ತನಗೂ ಏನೂ ಸಂಬಂಧವಿಲ್ಲವೆನ್ನುವಂತೆ ಆ ಮನೆಯ ಒಡೆಯ ಬ್ಯಾಂಕಿನಲ್ಲಿ ಲಕ್ಷಾಂತರ ರೂಪಾಯಿ ಉಳಿಸಿ, ಮಕ್ಕಳನ್ನು ಕಾನ್ವೆಂಟಿಗೆ ಕಳಿಸಿ ಓದಿಸುತ್ತಾ ನಾಳೆಯ ಭವಿಷ್ಯ ಬಹು ಸುಂದರವಾಗಿರುತ್ತದೆ ಎಂದು ಕನಸು ಕಾಣುವ ದುರಂತದ ಬಗ್ಗೆ ಮಾತ್ರ ಬರೆಯಬೇಕೆ ? ಚಿಟ್ಟೆಗಳು ಪಾರ್ಥೇನಿಯಂ ಗಿಡಗಳ ಮೇಲೆ ಕೂರಬೇಕಾಗಿ ಬಂದದ್ದು ಕುಳಿತಾಗ ಏನಾಗಬಹುದೆಂಬ ಸಂಗತಿ, ಆ ಮನೆ ಒಡೆಯನ ಚಿಂತನೆಯ ದುರಂತಕ್ಕಿಂತ ಯಾವ ರೀತಿ ಕಡಿಮೆ. ಈಗ ಚಾಲ್ತಿಯಲ್ಲಿರುವ ಕಥನ ಕ್ರಮದ ಪ್ರಕಾರ ಮನೆ ಒಡೆಯನ ದುರಂತಕ್ಕೆ ನಾನು ಹೆಚ್ಚು ಗಮನ ಕೊಡಬೇಕು ಚಿಟ್ಟೆ ಪಾರ್ಥೇನಿಯಂಗಳನ್ನೆಲ್ಲ ಸಸ್ಯಶಾಸ್ತ್ರಜ್ಞರಿಗೆ, ಛಾಯಾಗ್ರಾಹಕರಿಗೆ ಬಿಡಬೇಕು. ಇದೆಲ್ಲಕ್ಕಿಂತ ಮುಖ್ಯವಾಗಿ ನನ್ನದೂ ಒಂದು ಕಾಣಿಕೆಯಿದೆಯಲ್ಲ ದುರಂತಕ್ಕೆ. ಈ ಚಿಟ್ಟೆಗಳು, ಈ ಪಾರ್ಥೇನಿಯಂ ಇವೆಲ್ಲ ಈಗ ಬರೆಯುವಾಗ ಮಾತ್ರ ಕಾಣುತ್ತಿವೆ ; ಎಷ್ಟೋ ವರ್ಷಗಳಿಂದ ಹೀಗೆ ಎದುರಿಗೇ ಇದ್ದರೂ ಮೊದಲು ಯಾಕೆ ಇವು ನನಗೆ ಕಾಣಲಿಲ್ಲ. ಈ ಸಂಗತಿಗಳಿಗೂ ನನಗೂ ಸಂಬಂಧವಿಲ್ಲವೆಂದೇ ನನ್ನ ಪ್ರಜ್ಞೆ ನನಗೇ ಹೇಳಿಕೊಂಡಿರಬೇಕು.

ನಾನು ಕತೆಗಳನ್ನು, ಕತೆಗಾರಿಕೆಯನ್ನು ಸರಳೀಕರಿಸುತ್ತಿಲ್ಲ. ಹಾಗಂತ ಇದೆಲ್ಲವನ್ನು ಏನೋ ವಿಶೇಷವಾದದ್ದು ಎಂದು ನೋಡುವುದರಲ್ಲು ನನಗೆ ನಂಬಿಕೆಯಿಲ್ಲ. ನನ್ನ ಮಟ್ಟಿಗಂತೂ ಒಬ್ಬ ಕತೆಗಾರ ಅದೆಷ್ಟು ಕತೆಗಳನ್ನು ಬರೆಯುತ್ತಾನೆ, ಅದೆಷ್ಟು ಕಲಾತ್ಮಕವಾಗಿ ಬರೆಯುತ್ತಾನೆ ಎಂಬುದು ಮುಖ್ಯ ಸಂಗತಿಯೇ ಅಲ್ಲ. ಮನುಷ್ಯನಾಗಿ ಅವನು ಎಷ್ಟನ್ನು ಕಾಣುತ್ತಾನೆ, ಕಂಡ ಪದಾರ್ಥಗಳ ಸಂಗತಿಗಳ ಪರಸ್ಪರ ಸಂಬಂಧವನ್ನು ಎಷ್ಟರ ಮಟ್ಟಿಗೆ ತಿಳಿಯುತ್ತಾನೆ ಎಂಬುದು ನನಗೆ ಮುಖ್ಯ. ಇದಕ್ಕೂ ಕತೆಗಾರಿಕೆಗೂ ಸಂಬಂಧವಿಲ್ಲವೆನ್ನ ಬೇಡಿ. ಹಾಗೆ ಕಾಣುವವನು ನಮಗೂ ಕಾಣಿಸದೆ ಬಿಟ್ಟಾನೆ. ಆದರೆ ಅವನು ಕಾಣವುದು, ಕಾಣಿಸುವುದು ಎಲ್ಲವೂ ಉಸಿರಾಟದಂತೆ, ಪ್ರೀತಿಯಂತೆ, ಚಿಟ್ಟೆಯ ಹಾರಾಟದಂತೆ, ಸಹಜವಾಗಿರುತ್ತದೆ, ಪ್ರಾಸಂಗಿಕವಾಗಿರುತ್ತದೆ. ತುಂಬಾ

Elemental ಕೂಡ ಆಗಿರುತ್ತದೆ. "ಏನು ನೀನು ಹೇಳುವುದು, ಜಗತ್ತಿನಲ್ಲಿರುವ ರೆಲ್ಲರೂ ಕತೆಗಾರರೋ, ಹಾಗಾದರೆ ನಮ್ಮ ಪ್ರತಿಭೆ, ಸೃಜನಶೀಲತೆ ಇವುಗಳಿಗೇನು ಬೆಲೆಯೇ ಇಲ್ಲವೆ" ಎಂದು ಕತೆಗಾರ ಮಿತ್ರರು ಮುನಿಯುವುದು ಬೇಡ. ಏಕೆಂದರೆ ಕೇವಲ ರಚಿಸುವ, ಶಿಲ್ಪಿಸುವ ಕತೆಗಳ ಬಗ್ಗೆ ನನಗೆ ಕೊಂಚವೂ ಆಸಕ್ತಿಯಿಲ್ಲ. ನನ್ನ ಆಸಕ್ತಿ ಏನಿದ್ದರೂ ನಮ್ಮಗಳ ಜೊತೆಯೇ ಬೆಳೆಯುವ, ಬದುಕುವ ಕತೆಗಳ ಬಗ್ಗೆಯೇ. ನಿಮಗಾಗಿ ನೀವು ಬರೆಯುವ ಕತೆಗಳನ್ನು ನಾನು ಓದದಿದ್ದರೂ ನಡೆದೀತು. ನನ್ನ ಜೊತೆಯೇ ಇರುವ, ನನ್ನೆದುರಿಗೆ ಇರುವ ಕತೆಗಳನ್ನ ಕಾಣದಿದ್ದರೆ ಹೇಗೆ.

ನೋಡಿ ಎದುರಿಗಿದ್ದ ಚಿಟ್ಟೆ ಆಗಲೇ ಎಲ್ಲಿಗೋ ಹಾರಿಹೋಗಿದೆ. ಈಗ ನೀವೇ ಹೇಳಿ, ನೀವು ಬರೆದಿರುವ ಕತೆ ಓದುತ್ತಾ ಕೂರಲೋ ಅಥವಾ ಆ ಚಿಟ್ಟೆಗಳಿಗೆ ಪಾರ್ಥೇನಿಯಂ ಮೇಲೆ ಬಂದಿರುವ ಮುನಿಸನ್ನೂ, ಬೇಸರವನ್ನೂ ತಿಳಿಯಲು ಆವುಗಳನ್ನು ಹಿಂಬಾಲಿಸಲೋ.

---

...ಒಂದು ಕಾದಂಬರಿ ನೀಡುವ ಅನುಭವದ ಸಮಗ್ರತೆಯನ್ನು ನಾವು ಒಂದು ಸಣ್ಣ ಕತೆಯಿಂದ ನಿರೀಕ್ಷಿಸುವಂತಿಲ್ಲ. ಸಣ್ಣ ಕತೆಯ ವ್ಯಾಪ್ತಿ ಚಿಕ್ಕದಾಗಿರುವುದರಿಂದ, ಜೀವನದ ಅರ್ಥಪೂರ್ಣವಾದ ಸನ್ನಿವೇಶದ ಒಂದು ಕ್ಷಣಿಕ ಅವಲೋಕನ ಮಾತ್ರಾ ಕಥೆಯ ಮೂಲಕ ಸಾಧ್ಯವಾಗಬಹುದು...ಮರಳ ಕಣದಲ್ಲಿ ವಿಶ್ವವನ್ನು ಕ್ಷಣದ ಆವಕಾಶದಲ್ಲಿ ಅನಂತತೆಯನ್ನು ಸೆರೆಹಿಡಿಯುವ ಶಕ್ತಿ ಭಾಷೆಗಿದೆಯೇ ಎಂದು ಪರೀಕ್ಷಿಸ ಬಹುದು. ಇದೇ ಕಾರಣಕ್ಕಾಗಿ ಸಣ್ಣ ಕತೆಯ ಬರವಣಿಗೆ ಯಾವಾಗಲೂ ಧ್ವನಿ ಪೂರ್ಣತೆಯ ಕಡೆ, ವ್ಯಂಗ್ಯದ ಕಡೆ, ಅನುಭವದ ಬೆಳವಣಿಗೆಗಿಂತಾ, ಅದರ ಸಾರವನ್ನಷ್ಟೇ ಹಿಡಿಯುವುದರ ಕಡೆಗೆ ಪ್ರಯತ್ನ ಮಾಡುತ್ತಲೇ ಇರುತ್ತದೆ.

**—ಕೀರ್ತಿನಾಥ ಕುರ್ತಕೋಟಿ**

---

# ಕೆಲವು ಕಥೆಗಳ ಬಗ್ಗೆ

---

**ವೆಂಕಟ್ರಮಣ ಗೌಡ**

ನಾನಿಲ್ಲಿ ಹೇಳ ಹೊರಟಿರುವುದು ನನ್ನ ಓದಿನ ಹೊತ್ತಿಗೆ ನನ್ನನ್ನು ಆಪ್ತವಾಗಿ ತಟ್ಟಿದ, ಎದೆಯ ಸೀಮೆಯ ಒಳಗೆ ಪುಳಕ ಹಚ್ಚಿ ನಿಂತ ಈಚೀನ ಒಂದಿಷ್ಟು ಕಥೆಗಳ ಬಗ್ಗೆ. ಈ ಕಥೆಗಳು ಓದಿನ ತತ್‌ಕ್ಷಣದಿಂದ ಆನಂತರವೂ ಅನನ್ಯವೆನ್ನಬಹುದಾದ ರೀತಿಯಲ್ಲಿ ಆವರಿಸಿಕೊಂಡಿವೆ. ಈ ಕತೆಗಳಲ್ಲಿನ ನೆತ್ತರು ಮತ್ತು ಅದರ ಚಲನೆಯಲ್ಲಿ ಸೆಳಕು ತೋರಿರುವ ಪ್ರೀತಿಯ, ಮಾರ್ದವತೆಯ, ಮಾನವತೆಯ, ತಾತ್ವಿಕ ಚಿಂತನದ ಜೈವಿಕ ತುಡಿತಗಳ ಧಾರೆಯೇ ನನ್ನ ಮನಸ್ಸನ್ನು ಹಿಡಿದು ನಿಲ್ಲಿಸಿದ್ದಾಗಿದೆ. ಮತ್ತಿದೇ ಇತರ ಓದುಗರನ್ನು ತಟ್ಟಬಲ್ಲದಾಗಿದೆಯೆಂದು ನಂಬುತ್ತೇನೆ. ಈ ಕಥೆಗಳ ಕುರಿತಂತೆ ನಾನು ಹೇಳಲಿರುವ ಇಲ್ಲಿಯ ಮಾತುಗಳಲ್ಲಿ ವಿಮರ್ಶಾತ್ಮಕ ಕಾಳಜಿ ಗಾಂಭೀರ್ಯಗಳಿಲ್ಲದಿದ್ದರೂ ಸಹೃದಯನೊಬ್ಬ ಸಾಹಿತ್ಯಕೃತಿಯ ಅಕ್ಷರ ಧ್ವನಿಯನ್ನು ಅದರೆಲ್ಲ ಸಾಧ್ಯತೆಗಳೊಂದಿಗೆ ಗ್ರಹಿಸಲು ತೆರೆದುಕೊಳ್ಳುವಲ್ಲಿನ ಸಹಜತೆಯಿದೆಯೆಂದು ನಮ್ರತೆಯಿಂದ ತಿಳಿಯುತ್ತೇನೆ.

ಜಯಂತ ಕಾಯ್ಕಿಣಿಯವರ 'ಉನ್ನಿಕೃಷ್ಣನ್ ಬಂದು ಹೋದ' ಕಥೆಯಲ್ಲಿ ತೀರ್ಥಯಾತ್ರೆಗೆಂದು ಮನೆ ಬಿಟ್ಟ ಕೇರಳದ ಕಡೆಯ ಉನ್ನಿಕೃಷ್ಣನ್ ಒಂದಿನ ಗೋಕರ್ಣಕ್ಕೆ ಬರುತ್ತಾನೆ. ರಾಮತೀರ್ಥದ ಗುಡ್ಡದ ನೆಲೆ ಅಪ್ತವೆನ್ನಿಸುತ್ತದೆ. ರಾಮದೇವರಿಗೆ ಕಾರ್ತಿಕದ ಪೂಜೆಯ ತಯಾರಿ ನಡೆದಿದ್ದಾಗ ಬೆಳಕು ಮುಳುಗುತ್ತಿರುವ ಹೊತ್ತಿಗೆ ಬಂದ ಹೆಂಗಸೊಬ್ಬಳು ಆತನಿಗೂ ಉಳಿದ ಬೈರಾಗಿಗಳಿಗೂ ಬಾಳೆಹಣ್ಣು ಹಂಚಿ ಗುಡ್ಡದಂಚಿನ ಸಮುದ್ರದ ಬರಿಯ ಇಕ್ಕಟ್ಟಾದ ದಾರಿಯಲ್ಲಿ ನಡೆದುಬಿಡುತ್ತಾಳೆ. ಅವಳು ಜೀವ ತೆಕ್ಕೊಳ್ಳುವುದಕ್ಕೇ ಹೋಗುತ್ತಿದ್ದಾಳೆನ್ನಿಸಿ ಉನ್ನಿಕೃಷ್ಣನ್ ಸ್ವಲ್ಪ ದೂರ ಅವಳನ್ನು ಹಿಂಬಾಲಿಸಿದರೂ ಮತ್ತೇಕೋ ಮರಳಿ ಬಂದುಬಿಡುತ್ತಾನೆ. ಮರುದಿನ ಮುಂಜಾನೆ ಅಮ್ಮನಿಗಾಗಿ ಅಳುತ್ತಿರುವ ಚಿಕ್ಕ ಹುಡುಗಿಯನ್ನು ನೋಡುತ್ತಾನೆ. ಹೊರಗೇ ಇದ್ದು ಗೆದ್ದೆನೆನ್ನುವ ನನ್ನ ಭ್ರಮೆ ತಾಯಿಯನ್ನು ಉಳಿಸದೇ ಹೋಯಿತಲ್ಲ ಎಂಬುದೇ ಅವನನ್ನು ಬಲವಾಗಿ ಕಾಡುತ್ತವೆ. ತನ್ನ ಊರಿಗೆ ಹೋಗಲು ನಿರ್ಧರಿಸಿ ಆವತ್ತೇ ಗೋಕರ್ಣ ಬಿಡುತ್ತಾನೆ. ಇಲ್ಲಿ ಉನ್ನಿಕೃಷ್ಣನ್ ಬಂದು ಹೋಗುವ ಕ್ರಿಯೆ 'ಒಳಗಿದ್ದ ಹೊರತು ನನ್ನ ಯಾವ ಯತ್ನಗಳಿಗೂ ಅರ್ಥವಿಲ್ಲ' ಎಂದು ಆತ

ಮನಗಾಣುವಲ್ಲಿ ಅರ್ಥಪೂರ್ಣವಾಗುತ್ತದೆ. 'ತಾಯಿಯ ದೇಹಕ್ಕಲ್ಲಮ್ಮ ತಾಯಿಗಾಗಿ ಕಾಯಿ. ಅವಳು ಇದ್ದಾಳೆ, ಖಂಡಿತ ಇರುತ್ತಾಳೆ' ಎಂದು ಆತ ಆ ಹುಡುಗಿಗೆ ಹೇಳುವುದು ಇಡೀ ಕಥೆಯ ಸತ್ವ ಮತ್ತು ಧೀಮಂತಿಕೆಯಾಗಿದೆ.

ಕುಮಾರ ಜೋಶಿಯವರ 'ಸಿಸ್ಟರ್ ಮಿರಾಂಡಾಳ ಕಪ್ಪು ರವಿವಾರ' ಕಥೆಯಲ್ಲಿ ಬದುಕು ಸಾಧ್ಯವೇ ಆಗಲಾರದಂಥ ಭೀಕರ ವಿಷಾದದಲ್ಲಿ ಜರ್ಝರಿತಳಾದ ಮಿರಾಂಡಾ ತನ್ನ ಬದುಕಿಗೆ ತಾನೇ ಒಂದು ಅಂತ್ಯವನ್ನು ಬರಕೊಳ್ಳುವ ದುರಂತವಿದೆ. ಅವಳ ಬದುಕಿನ ಒಟ್ಟು ಕ್ರೂರ ಸಂದರ್ಭ ಅವಳ ಪಾಲಿನ ಕಪ್ಪು ರವಿವಾರವನ್ನು ಸ್ಥಾಪಿಸುತ್ತದೆ.

ಅನಾಥಾಲಯವೊಂದರಲ್ಲಿ ಬಂಧಿಯಾಗಿದ್ದ ಕಮಲ ಎಂಬ ಹುಡುಗಿ ತನ್ನ ಬದುಕನ್ನು ಪಡಕೊಳ್ಳುವ ಉತ್ಕಟ ಇಚ್ಛೆಯಲ್ಲಿ ಅನಾಥಾಲಯದಿಂದ ಕಾಣೆಯಾಗುವುದು ಎಸ್. ದಿವಾಕರ ಅವರ 'ಮುಗಿಯದಾಸೆಯ ಬಾಗಿಲು' ಕಥೆಯ ವಸ್ತು. ಪ್ರೀತಿಯ ತೇವವಿರದ ಅನಾಥಾಲಯದ ಬಿಗಿಭದ್ರತೆಯಲ್ಲಿ ಸಿಡುಕುವ ಮದರ್ ಸುಪೀರಿಯರ್ ಮತ್ತು ಬೆನ್ನಿಗೇ ಇದ್ದು ಕಾಯುವ ಸಿಸ್ಟರುಗಳ ನಡುವೆ ಮುದುರಿಕೊಂಡಿರುವ ಎಷ್ಟೋ ಹುಡುಗಿಯರಲ್ಲಿ ಕಮಲ ಒಬ್ಬಳು. ಅವಳ ತುಡಿತಗಳು ತೀವ್ರವೂ ಆದಮ್ಯವೂ ಆದಂಥವು. ಕಾಮನ ಬಿಲ್ಲು ಕಂಡು, ಮಗುವಾಗಿದ್ದಾಗ ಅಜ್ಜ ಅವರಿಂಚಲ್ಲಿದೆಯೆಂದು ಕಥೆ ಹೇಳಿದ್ದ ಅರಮನೆಯ ಕನಸು ಕಾಣುತ್ತ ಒಂದು ಬಗೆಯ ಸುಮಧುರ ಯಾತನೆ ಯಿಂದ ಕರಗಿ ನಿರಾಳವಾಗುವ ಹುಡುಗಿ ಅವಳು. ಅನಾಥಾಲಯದ ಕಾಂಪೌಂಡಿನ ಗೋಡೆಯ ರಿಪೇರಿ ಮಾಡಲು ಬಂದ ಆಂತೋಣಪ್ಪನ್ ಸೆಕೆಯಿಂದಾಗಿ ಷರ್ಟು ಕಳಚಿದಾಗ ಅವನ ಬತ್ತಲೆದೆಯನ್ನೇ ಒಂದಿಷ್ಟೂ ನಾಚಿಕೊಳ್ಳದೆ ದಿಟ್ಟಿಸುತ್ತಾಳೆ. ಅಂಥವಳು ಕೊನೆಗೂ ಒಂದಿನ ಅಲ್ಲಿಂದ ತಪ್ಪಿಸಿಕೊಳ್ಳುವುದು ಕಥೆಯಲ್ಲಿ ಜರುಗುತ್ತದೆ.

ಫಕೀರ್ ಮಹಮ್ಮದ್ ಕಟ್ಪಾಡಿಯವರ 'ಬುರ್ಖಾ' ಕಥೆಯಲ್ಲಿ, ಮಗಳ ಮನೆಗೆ ಜೈನಾಬಿ ಬಂದಿದ್ದ ಸಂದರ್ಭದಲ್ಲೇ ನಗರದಲ್ಲಿ ಕೋಮುಗಲಭೆ ಶುರುವಾಗಿ ಹಿಂದೂ ಮುಸ್ಲಿಂರು ಹೊಡೆದಾಡಿ ಸಾಯುತ್ತಾರೆ. ಎಲ್ಲೆಡೆ ಪರಿಸ್ಥಿತಿ ಬಿಗಡಾಯಿಸಿರುತ್ತದೆ. ಮಗಳನ್ನು ನೋಡುವುದಕ್ಕಿಂತ ಮುಖ್ಯವಾಗಿ ಸೈದಾನಿಬೀಬಿಯ ದರ್ಗಾಕ್ಕೆ ಹೋಗಿ ದುವಾ ಮಾಡಬೇಕೆನ್ನುವ ಹಂಬಲದಲ್ಲೇ ಬಂದಿದ್ದ ಜೈನಾಬಿ ಕೊನೆಗೂ ಒಂದಿನ ಮಗಳು ಸಲ್ಮಾ ಬೇಡವೆಂದರೂ ಕೇಳದೆ ಬುರ್ಖಾ ಹಾಕಿಕೊಂಡು ಬಿಕೋ ಎನ್ನುವ ಬೀದಿಗಿಳಿದು ದರ್ಗಾದ ಕಡೆ ನಡೆದೇಬಿಡುತ್ತಾಳೆ. ದಾರಿಯಲ್ಲಿ ಬೇರೊಬ್ಬ ಹೆಂಗಸಿಗೆ ಗಲಭೆಯ ಕಾರಣದಿಂದಾಗಿ ಬುರ್ಖಾದ ಅನಿವಾರ್ಯತೆಯಿದ್ದುದರಿಂದ ಜೈನಾಬಿ ಗಂಡ ಕೊಡಿಸಿದ್ದ ಆ ಬುರ್ಖಾವನ್ನು ಕೊಟ್ಟುಬಿಡುತ್ತಾಳೆ. ದರ್ಗಾಕ್ಕೆ ಇನ್ನೊಮ್ಮೆ ಎಂದಾದರೂ ಹೋದರಾಯ್ತೆಂದು ಮಗಳ ಮನೆಗೆ ಮರಳುತ್ತಾಳೆ. ಬುರ್ಖಾ ತೊಡದೆ

ಬೀದಿಯಲ್ಲಿ ನಡೆದಾಡುವುದೆಂದರೆ ಬೆತ್ತಲೆ ತಿರುಗಾಡಿದಂತೆ ಎಂದೇ ನಂಬಿದ್ದ ಅವಳು ಅಂಥ ಸಂಪ್ರದಾಯ ಬದ್ಧತೆಯನ್ನೂ ಮೀರಿ ಅವಳೊಳಗಿನ ಮಾನವೀಯತೆ ದೃಢ ವಾಗುವುದನ್ನು ಇಲ್ಲಿ ನೋಡಬೇಕು.

ಬಿ. ಆರ್. ಲಕ್ಷ್ಮಣರಾವ್ ಅವರ ಕಥೆ 'ಕಬ್ಬೆಕ್ಕು' ತುಂಬ ಸರಳ ವಾಗಿಯೂ ಹೃದ್ಯವಾದ ಕಥೆ. ಇಲ್ಲಿಯ ನಾಯಕಿ ಮಾಲಿನಿ ತನ್ನನ್ನು ನೋಡಲು ಬಂದವನನ್ನು ಇಷ್ಟಪಡದೆ ಅವನೊಂದಿಗೆ ಬಂದಿದ್ದ ಅವನ ಸ್ನೇಹಿತನನ್ನು ಇಷ್ಟ ಪಡುತ್ತಾಳೆ. ಆತ ಬ್ರಾಹ್ಮಣನಲ್ಲ ಮುಸಲ್ಮಾನ ಎಂದು ತಿಳಿದ ಮೇಲೂ-ತನ್ನೆಲ್ಲ ಊಹೆಗಳಿಗೂ ಮೀರಿದ ಸತ್ಯದ ಆಘಾತಕ್ಕೆ ತತ್ತರಿಸಿಯೂ-ತುಂಬ ಯೋಚನೆ ಮಾಡಿ ಅವನನ್ನೇ ಮದುವೆಯಾಗಲು ನಿರ್ಧರಿಸುತ್ತಾಳೆ.

ಮೊಗಳ್ಳಿ ಗಣೇಶ್ ಅವರ 'ನಾದದ ನದಿಯೊಂದು ನಡೆಧಾಂಗ' ಕತೆ ಹಾಗೇ ಚಲಿಸುತ್ತದೆ ಆರಂಭದಿಂದ ಕೊನೆತನಕ. ಈ ಮೊದಲು ಎಂದೂ ಒಬ್ಬರನ್ನೊಬ್ಬರು ಕಂಡಿರದ ಹರೆಯದ ಹುಡುಗ ಹುಡುಗಿ ಆಕಸ್ಮಿಕವಾಗಿ ಒಟ್ಟುಗೂಡುತ್ತಾರೆ. ಅವನು ಗೀಜುಗಾ, ಆಕೆ ವಾರಿಜಾ. ಆತನ ಕವಿತೆಗಳ ಸುಡುವ ಬದುಕಿಗೆ ಮೆಚ್ಚಿದ್ದ ಆ ಕವಿತೆ ಬರೆವ ಹುಡುಗಿ, ಆತ ಸಿಕ್ಕೊಡನೆ ಯಾವ ಮುಲಾಜೂ ಇಲ್ಲದೆ ನಾಚಿಕೆ ಎಂಬ ಭಾವನೆ ಯಿಲ್ಲದೆ ಒಂದಾಗಿಬಿಟ್ಟಿದ್ದಳು. ಒಂದು ಇಡೀ ರಾತ್ರಿಯನ್ನು ಒಟ್ಟಾಗಿ ಕಳೆದ ಅವರಿಬ್ಬರೂ ಪರಸ್ಪರ ಬಿಟ್ಟಿರಲಾರದೆಯೂ ಅಗಲಲೇಬೇಕಾದ ಸಂದರ್ಭ ಮುಂದಿದೆ. ಆ ಸಂದರ್ಭದಲ್ಲಿ ನಾಯಕ ಚಡಪಡಿಸುತ್ತಾನೆ. ಅದು ಒದಗಿಯೂಬಿಟ್ಟಾಗ ಅವನ ಪ್ರಜ್ಞೆಯಲ್ಲಿ ನಡೆವ ಕ್ರಿಯೆ ಒಂದು ರೀತಿಯಲ್ಲಿ ಬೌದ್ಧಿಕ ಸಂಘರ್ಷವೂ ಆಗುತ್ತ ಜೀವನದ ಶೋಧವೂ ಆಗುತ್ತದೆ.

'ಊರ ಮಧ್ಯದ ಕಣ್ಣ ಕಾಡಿನೊಳಗೆ' ಎಂಬ ಅರ್ಥವತ್ತಾದ ಶೀರ್ಷಿಕೆಯ ಕಥೆ ಕೇಶವ ಮಳಗಿ ಅವರದು. ಬಡ ಅನಾಥ ಹುಡುಗನೊಬ್ಬ ಬದುಕಿನಲ್ಲಿಯ ಭಾಗ್ಯ ತೆರೆವ ತಿರುವುಗಳಿಂದಾಗಿ ಚಿತ್ರಕಾರನಾಗುತ್ತಾನೆ, ಪ್ರಸಿದ್ಧ ಕಲಾವಿದನಾಗುತ್ತಾನೆ, ಹಣ ಬರುತ್ತದೆ, ಪ್ರಶಸ್ತಿ-ಪ್ರಸಿದ್ಧಿ-ಶಾಲುಗಳು ಬರುತ್ತವೆ. ಮನಸ್ಸು ಸಂಕುಚಿತವಾಗುತ್ತದೆ. ನೀಚತನಗಳು ಅವನಿಂದ ಎಸಗಲ್ಪಡುತ್ತವೆ. ಇಂಥವನು ಒಂದು ಹಂತದಲ್ಲಿ ಆತ್ಮ ವಿಮರ್ಶೆಗೆ ತೊಡಗುತ್ತಾನೆ. ಹೊಸ ಬದುಕೊಂದನ್ನು ಹಂಬಲಿಸುತ್ತಾನೆ. ಅವನ ಹಂಬಲದಲ್ಲಿ ಬಾಲ್ಯದ ಕ್ಷಣಗಳಿರುತ್ತವೆ, ಬದುಕಿನ ತೇವವಿರುತ್ತದೆ.

ಚಂದ್ರಕಾಂತ ವಡ್ಡು ಬರೆದ 'ನಾರಿಹಳ್ಳದ ದಂಡೆಯಲ್ಲಿ' ಕಥೆ ಊರು ಬಿಟ್ಟು ಹೊರಟಿದ್ದ ನಾಯಕ ಇಪ್ಪತ್ತೈದು ವರ್ಷಗಳ ನಂತರ ಮರಳಿ ಬರುವದರೊಂದಿಗೆ ಆರಂಭವಾಗುತ್ತದೆ. ಪರಶುರಾಮನ ಮದುವೆ ಜಲಜಾಕ್ಷಿಯೊಂದಿಗೆ ನಿಶ್ಚಯವಾಗಿ, ಮದುವೆಯ ಮುಹೂರ್ತಕ್ಕೆ ಒಂದೆರಡು ಗಂಟೆಗಳಷ್ಟೇ ಇರುವಾಗ ಅವರು ಗಡ್ಡ ಬೋಳಿಸಿಕೊಂಡರೇನೇ ನಾನು ಮದುವೆ ಮಾಡಿಕೊಳ್ಳೋದು ಎಂದು ಮೂರನೇಯವರ

ಮೂಲಕ ಹೇಳಿಸಿ ತನ್ನದೇ ಹಠ ದೊಡ್ಡದು ಮಾಡುತ್ತಾಳೆ. ಪರಶುರಾಮನ ಆತ್ಮಗೌರವ ಕೂಡ ಸೋಲದೆ ಅವಳ ಮಾತನ್ನು ನಿರಾಕರಿಸುತ್ತಾನೆ. ಮದುವೆ ಮುರಿದುಬೀಳುತ್ತದೆ. ಅದೇ ಮಂಟಪದಲ್ಲಿ ನೀಲಪ್ಪ ಮೇಷ್ಟ್ರ ಮಗ ಶುಕ್ರ ಅವಳನ್ನು ಮದುವೆಯಾಗುತ್ತಾನೆ. ಪರಶುರಾಮ ಊರು ಬಿಡಲು ಕಾರಣವಾದ ಕಥೆ ಇಷ್ಟು. ಆತ ಪುನಃ ಊರಿಗೆ ಬಂದು ತಾಯಿಯ ಉಲ್ಲಾಸಕ್ಕೆ ಕಾರಣನಾಗಿ ಗಡ್ಡವನ್ನು ಬೋಳಿಸಿಕೊಳ್ಳುತ್ತಾನೆ. ನಾರಿಹಳ್ಳ ಬದುಕಿನ ಸಂಕೇತವಾಗಿ ಹರಿಯುವಿಕೆಗಾಗಿ ತುಡಿವ ಪ್ರಕ್ರಿಯೆ ಕಥೆಯ ಕೊನೆಯಲ್ಲಿ ದಟ್ಟವಾಗುತ್ತದೆ.

ರವಿ ಬೆಳಗೆರೆಯವರ 'ವಿತಥ' ಕಥೆಯ ವಿವರಗಳಲ್ಲಿ ಸಂಪ್ರದಾಯದೊಳಗಿನ ಪೊಳ್ಳುತನ, ಕುಲೀನತೆಯೊಳಗಿನ ಖಾಲಿತನ ಬಹಿರಂಗವಾಗುತ್ತದೆ. ಅನಸೂಯಳಂಥ ಹೆಂಗಸಿನ ಆರ್ದ್ರ ಕನಸುಗಳೂ ಕೂಡ ಸುಳ್ಳಾಗಿಬಿಡುತ್ತವೆ. ಮೈಲಿಗೆಯ ದಟ್ಟತೆಯಲ್ಲೂ ಮಡಿಯ ಪ್ರಶ್ನೆಯನ್ನು ಜಾಗೃತ ಮಾಡುವ ಸುಳ್ಳುತನವೇ ನಾಜೂಕಾಗಿ ಆವರಿಸಿ ಕೊಳ್ಳುತ್ತದೆ.

ನೇಮಿಚಂದ್ರ ಅವರ 'ಹೊಸ ಹುಟ್ಟು' ಕಥೆ ಬದುಕಿನಲ್ಲಿಯ ಕೊರತೆಯನ್ನು ಕಲೆಯಿಂದ ಮತ್ತದರ ಮೂಲಕವಾಗಿ ದೊರಕುವ ಆತ್ಮತೃಪ್ತಿಯಿಂದ ತುಂಬಿಕೊಳ್ಳುವ ಹೊಸ ನಿಲುವು ಕಾಣಿಸುತ್ತದೆ. ಮಕ್ಕಳಿಲ್ಲದ ಚಿತ್ರಕಲಾವಿದೆ ಶಶಿ ಇಲ್ಲಿ ಅಂಥ ಅನನ್ಯತೆ ಯೊಂದನ್ನು ತೆರೆದು ತೋರುವ ಸ್ತ್ರೀಪ್ರತಿನಿಧಿಯಾಗಿದ್ದಾಳೆ.

ಎಂ. ಎಸ್. ವೇದಾ ಬರೆದ 'ಪಾಲು' ಕಥೆಯಲ್ಲಿ ಸಾಕವ್ವನ ಮಕ್ಕಳು ಅವಳೆದುರೇ ಮನೆಯನ್ನು ಪಾಲು ಮಾಡಿಕೊಳ್ಳುತ್ತಾರೆ. ಇಲ್ಲಿ ಸಾಂಸ್ಕೃತಿಕ ಸಂಗತಿ ಯೊಂದು ಚೂರಾಗುವ ದುರಂತವಿದೆ. ಅಂಥ ವಿಷಾದದಲ್ಲೂ ಸಾಕವ್ವನಂಥ ಮುದಿಜೀವ ಬದುಕಿನಂಥ ಸತ್ಯಕ್ಕೊಂದು ನೆಲೆ ಕಂಡುಕೊಳ್ಳುವ ಅನನ್ಯತೆಯಿದೆ.

'ಕಾಡ ಮೂಲಕವೇ ಪಥ ಆಗಸಕ್ಕೆ' ಎಂಬ ಕಥೆಯನ್ನು ಜ್ಯೋತಿಗಿರೀಶ್ ಸುಂದರವಾಗಿ ಬರೆದಿದ್ದಾರೆ. ಸಮಾಜ ಕಾರ್ಯದಲ್ಲಿ ಸ್ನಾತಕೋತ್ತರ ಪದವೀಧರೆಯಾದ ಜ್ಯೋತಿ ಡಾ. ಯಯಾತಿ ಎಂಬುವರು ನಡೆಸುತ್ತಿರುವ Hope ಸಂಸ್ಥೆಗೆ ಒಂದು ವರ್ಷದ ತರಬೇತಿಗೆ ಆಯ್ಕೆಯಾಗಿ ಕಲಕತ್ತೆಗೆ ಹೋಗುತ್ತಾಳೆ. ಅಲ್ಲಿ ಸಾವಿರಾರು ಮಂದಿ ತೀರಾ ಮುಖ್ಯವಾದ ಇಂದ್ರಿಯಗಳನ್ನು ಕಳಕೊಂಡವರು. ಪ್ರೀತಿಯ ತೇವವನ್ನು ಅನುಭವಿಸದ ನತದೃಷ್ಟರು. ಅವರ ಸೇವೆಯೊಂದೇ ಬದುಕು ಎನ್ನುವ ಡಾ. ಯಯಾತಿ. ಅವರಿಂದ ಜ್ಯೋತಿ ತುಂಬ ಪ್ರಭಾವಿತಳಾಗುತ್ತಾಳೆ. ಈ ನಡುವೆ ಊರಿಗೆ ಹೊರಟು ಬಾ ಎಂದು ಗಂಡನಿಂದ ಪತ್ರ ಬರುತ್ತದೆ. ಜ್ಯೋತಿಯಲ್ಲಿ ಗೊಂದಲಗಳೇಳುತ್ತವೆ. ಕೊನೆಗೂ ಮನಸ್ಸು ಗಟ್ಟಿಮಾಡಿ ಆ ಮಂದಿಯ ಸೇವೆಗಾಗಿ ಅಲ್ಲೇ ಉಳಿದುಬಿಡಲು ನಿರ್ಧರಿಸಿ ಗಂಡನಿಗೆ ಬರೆಯುತ್ತಾಳೆ. ತೀರಾ ವಿಶಿಷ್ಟ ವಸ್ತುವುಳ್ಳ ಈ ಕಥೆ ಆರ್ದ್ರ ವಾಗುವುದು ತನ್ನೊಳಗಿನ ಹೃದಯವಂತಿಕೆಯಿಂದ.

ಪಿ. ಎಂ. ಮುತ್ತಣ್ಣ ಬರೆದ 'ಕಾಡುಪಾಪನೂ ಮತ್ತು ಗೊಂಬೆ ಎಂಬ ಹುಡುಗಿಯ ಕನಸುಗಳೂ' ಕಥೆ ಕೊಡಗಿನ ಪರಿಸರ ಮತ್ತು ಗಾಢವಾದ ವಿವರಗಳೊಂದಿಗೆ ಅರ್ಥ ತೆರೆಯುತ್ತದೆ. ಕಥೆಯಲ್ಲಿ ಗೊಂಬೆ ಎಂಬ ಹುಡುಗಿಯು ಮತ್ತು ದೇವಿ ಎಂಬ ಹುಡುಗನ ನಡುವೆ ಪ್ರೀತಿ ಮೂರ್ತಗೊಳ್ಳುವಾಗ ಅದು ಎಲ್ಲ ಕಟ್ಟುಗಳನ್ನು ಸೀಮೆಗಳನ್ನು ಮೀರಿ ಬಂದದ್ದಾಗಿರುತ್ತವೆ.

ಕೊನೆಯಲ್ಲಿ ಒಟ್ಟು ಕಥೆಗಳ ಕುರಿತಂತೆ ಒಂದು ಮಾತು ಹೇಳುವುದಾದರೆ, ನನ್ನೊಳಗೆ ಉಳಕೊಂಡ ಈ ಕಥೆಗಳೆಲ್ಲ ಒಂದಲ್ಲ ಒಂದು ಕಾರಣಕ್ಕಾಗಿ ವಿಶಿಷ್ಟವಾದವುಗಳಾಗಿವೆ. ಬದುಕಿನ ಕುರಿತ ಆದಮ್ಯ ಹಂಬಲ ಈ ಎಲ್ಲ ಕಥೆಗಳಲ್ಲಿ ಮಿಂಚುತ್ತದೆ. ಕೆಲವೆಡೆ ಅದರ ಸಾತತ್ಯವಿದೆ. ಈ ಕಥೆಗಳು ಬೌದ್ಧಿಕ ಆಟಾಟೋಪಗಳಿಂದಾಗಿ ಮುಖ್ಯವಾಗುತ್ತವೆ. ಕಥನದ ಭಾಷೆಯಲ್ಲಿ ಕಾವ್ಯಾತ್ಮಕತೆಯಿದೆ, ಸ್ಪರ್ಶದ ಮೂಲಕ ಕರಗಿಸಬಲ್ಲ ಓಘವಿದೆ, ಓಟವಿದೆ. ಬದುಕನ್ನು ಬೇರೆ ಬೇರೆ ನಿಟ್ಟಿನಿಂದ ಕೋನದಿಂದ ಗ್ರಹಿಸುವ ನೋಟವಿದೆ. ಈ ಕಥೆಗಳನ್ನು ಬರೆದ ಕಥೆಗಾರರೆಲ್ಲ ತಂತಮ್ಮ ಮನಸ್ಸಿಗೆ ತಮ್ಮನ್ನು ಧಾರೆಯೆರಕೊಂಡವರಾಗಿದ್ದಾರೆ.

---

ವಾಸ್ತವವಾದ ಮಾತ್ರವಲ್ಲ, ಸಾಹಿತ್ಯ ಮಾತ್ರವಲ್ಲ, ರಂಗಭೂಮಿ ಸಿನಿಮಾಗಳು ಮಾತ್ರವಲ್ಲ, ಇಂಡಿಯಾದ ಈ ಕಾಲದ ಇಡೀ ಬದುಕು ಎರಡು ಸಂಸ್ಕೃತಿಗಳ ಮಂಥನ ಕ್ರಿಯೆಯಲ್ಲಿ ಅದ್ದಿಕೊಂಡಿದೆ—ಅದರ ಎಳೆಯುಳಿಗಳು, ಪದರುಪದರುಗಳು, ಮೂಲೆ ಕಾಡಿನ ಹಳ್ಳಿಯಲ್ಲಿ ಅಡಿಕೆಯನ್ನೋ ಮತ್ತೇನನ್ನೋ ಬೆಳೆದುಕೊಂಡು ವಿವಕ್ತನಾಗಿದ್ದೇನೆ ಎಂದುಕೊಳ್ಳುವ ಮುಗ್ಧನನ್ನೂ ಬಿಡದೆ ಒಳಗೊಳಿಸಿಕೊಂಡು.

—ಕೆ. ವಿ. ಸುಬ್ಬಣ್ಣ

---

## ಸಂವೇದನೆ

# ಅಕ್ವೇರಿಯಾ

---

**ದಿ. ಕೆ. ವೆಂಕಟೇಶ್**

"ಎರಡು ದಿನಕ್ಕೆಲ್ಲಾ ಪಾಚಿ ಕಟ್ಟಿದೆ ಮುಂಡೇದು. ಒಂದು ವಾರಕ್ಕೋ ತಿಂಗಳಿಗೋ ತೊಳೆದು ನೀರು ತುಂಬೋ ಹಾಗಿದ್ದರೆ ಸಾಕ್ಬೋದು ನೋಡಪ್ಪ."

ಒಂದು ದುಂಡನೆ ಗಾಜಿನ ಬಾಟಲಿ, ಅದರಲ್ಲಿ ಒಂದು ಅದುಮಿಟ್ಟ ಸಮುದ್ರ ಯಾಕಾಗಬಾರ್ದು, ಅಗಸ್ತ್ಯ ಕುಡೀಲಿಲ್ವ ? ಕುಡಿದಾದ ಮೇಲೆ ಈ ಬಾಟಲಿಗೆ ಉಗಿದು ಹೋದ. ನಾಲ್ಕು ಮೀನು, ಎರಡು ಸಣ್ಣ ಕಪ್ಪೆಚಿಪ್ಪುಗಳು, ಒಂದು ಜಲಸಸ್ಯ ಮತ್ತು ನಾಲ್ಕೂ ಮೀನಿಗೆ ಜೀವ ಮತ್ತು ಈ ಜಲರಾಶಿಗೆ ಶಿವ (ನಾನು) ನೀಡಿದ ಆಹಾರ (5 ರೂಪಾಯಿಗೆ ಒಂದು ಡಬ್ಬ) ಈ ಜೀವ ಜಲರಾಶಿಗೆ ನಾನು ಠೇಕೇದಾರ. ಸಮುದ್ರವನ್ನು ಎರಡೂ ಕೈಗಳಲ್ಲಿ ಎತ್ತಿ ಜೋಪಾನವಾಗಿ ಜಲ ಸಸ್ಯವನ್ನೂ ಒಂದು ಪ್ಲಾಸ್ಟಿಕ್ ಬಟ್ಟಲಲ್ಲಿ ಇಟ್ಟೆ. (ಮುಂಡೆಗಂಡ ಹತ್ತು ರೂಪಾಯಿ ಕೇಳ್ತಾನೆ ಇಷ್ಟುದ್ದ ಸೊಪ್ಪಿಗೆ) ಕಾಸ್ಟ್ಲಿ ಅಲ್ಲ. ಕೈಲ್ಲಿದ್ದ ಸಮುದ್ರ ಜಾರಾಡುತ್ತಿತ್ತು. ಮೆಲ್ಲಗೆ ಸಮುದ್ರವನ್ನು ಬಟ್ಟಲ ಸಮೀಪಕ್ಕೆ ತಂದೆ. ಪಾರದರ್ಶಕ ಸಮುದ್ರದಲ್ಲಿ ನನ್ನ ಒಂದು ಕಿರುಬೆರಳಿನ ಅಗಲುವಿಕೆಗೆ ಏಳುತ್ತಿದ್ದ ಅಲೆಗಳು ಮಿನಿಯೇಚರ್ ಆರ್ಭಟ ತಾಳುತ್ತಾ ಸಮುದ್ರದ ಗಾಜಿನ ಗೋಡೆಯ ಮೇಲಿನ ಪಾಚಿಗೆ ರಾಚಿ ಬಡಿದವು. ಏಳು ದಿನವಾಗಿತ್ತು ತೊಳೆದು, ಮಿನುಗಳೆಲ್ಲಾ ಕೈಯಿದ್ದರೆ ಮೂಗು ಮುಚ್ಚಿಕೊಂಡೇ ಈಜಾಡಬೇಕಿತ್ತು. ಮೆಲ್ಲಗೆ ಸಮುದ್ರವನ್ನು ಪ್ಲಾಸ್ಟಿಕ್ ಬಟ್ಟಲಿಗೆ ಸುರಿಯತೊಡಗಿದೆ ಎರಡನೆಯದು. ಮೂರನೆಯದು ಕೂಡ ಸಲೀಸಾಗಿ ಬಟ್ಟಲಿಗೆ ದುಮುಕಿತು. ನಾಲ್ಕನೆಯದು ಧಾರೆಯಾಗಿ ಸುರಿಯುತ್ತಿದ್ದ ಸಮುದ್ರದ ಜೊತೆ ಕೊಚ್ಚಿ ಬಟ್ಟಲಿಗೆ ಬೀಳದೆ ಬಾಟಲಿಯಲ್ಲೆ ಉಳಿಯಿತು ಬಾಟಲಿಯಲ್ಲಿ ಮೀನು ಮತ್ತು ಅದನ್ನು ಅರ್ಧ ಮುಳುಗಿಸುವಷ್ಟು ನೀರೂ ಉಳಿಯಿತು. ಬಟ್ಟಲಿಗೆ ಬಗ್ಗಿಸಿದರೆ ನೀರು ಮಾತ್ರ ಸುರಿದು ಮೀನು ಅಲ್ಲೇ ಉಳಿದಿತ್ತು, ಸುಮ್ಮನಿದ್ದರೆ ರೇಷನ್ ನೀರಿನಲ್ಲಿ ಮೀನು ಸತ್ತೀತು ಒದ್ದಾಡುತ್ತಿದೆ. ತಲೆಯನ್ನು ನೀರೊಳಗೆ ಅದ್ದುವ ಆತುರದಲ್ಲಿ ಗಾಜಿಗೆ ತಲೆ ಒತ್ತುತ್ತಿದೆ. ಒಂದು ಹಿಡಿ ನೀರಿಗಾಗಿ ತಾರತಮ್ಯ ಮಾಡುವ ಅದನ್ನು ನೋಡಿ, ಬಟ್ಟಲಿಂದ ಒಂದಷ್ಟು ನೀರನ್ನು ವಾಪಸ್ ಬಾಟಲಿಗೆ ಸುರಿದೆ. ಸರಾಗವಾಗಿ ಈಜಾಡಲು ಶುರುಮಾಡಿತು. ಇಲ್ಲ, ಯಾಕೋ ತಲೆ

ಒಂದು ಪಕ್ಕಕ್ಕೆ ವಾಲಿಸಿಕೊಂಡು ಸುತ್ತಿದಲ್ಲೆ ಸುತ್ತಲು ಶುರುಮಾಡಿತು. ಹ...ಹ... ಹ... Thanks ಹೇಳ್ತಿದೆ (ರೋಡಲ್ಲಿ ಕೋತಿ ಕುಣಿಸೋದ ನೋಡಿಲ್ವ ನೀವು ?) ಹೋ...ಹೋ...ಹೋ... ಛೆ Mention not please... 'ಎಂದು' ಸಾಕು ಸಾಕು...ನೋಡಿ ನೋಡಿ, ಇಷ್ಟೇ ಇಷ್ಟು ನೀರಿಗೆ ಎಷ್ಟೊಂದು ಕೃತಜ್ಞತೆಯ ಕೋಲಾಹಲ ಇಲ್ಲ ಸ್ವಲ್ಪ ತಡೆಯಿರಿ, ಇಲ್ಲೇನೋ ಬೇರೆ ಸಮಾಚಾರವಿದ್ದ ಹಾಗಿದೆ... ಒದ್ದಾಡುತ್ತಿದ್ದ ಮೀನನ್ನು ಪ್ಲಾಸ್ಟಿಕ್ ಬಟ್ಟಲಿಗೆ ಸುರಿದೆ, ಸುತ್ತುತ್ತಲೇ ಹೋಯಿತು. ನೋಡುತ್ತಲೇ ಹೋದೆ ಅದು ಸುತ್ತುತ್ತಾ ನೀರು ರಿಂಗಣ ರಿಂಗಣವಾಗಿ ವ್ಯೂಹ ಕಟ್ಟುತ್ತಲೇ ಹೋಯಿತು ನೋಡುತ್ತಲೇ ಹೋದೆ, ನೋಡುತ್ತಲೇ ಹೋದೆ–ಸುತ್ತಲೂ ನೀರು, ತಲೆ ಎತ್ತಿ ನೋಡಿದಷ್ಟೂ ಎತ್ತರಕ್ಕೆ ನೀರು, ಅಬ್ಬ ! ಇದು ಅನಂತ–ನಗಬೇಡಿ, ನೀವೂ ಮುಳುಗಿ ನೋಡಿ. ನಾ ನಿಂತ ಆಳಕ್ಕೆ ಇಳಿದು ನೋಡಿ, ಸುತ್ತಲೂ ನೋಡಿದೆ, ಅನಂತವೆನಿಸುವಷ್ಟು ನೀರಿನಲ್ಲಿ ಒಂದೂ ಜೀವರಾಶಿಯ ಸುಳಿವಿಲ್ಲ. ಒಂದು ನಿಮಿಷ ಇಲ್ಲೇನೋ ಬರ್‍ತಾಯಿದೆ. ಸಣ್ಣದೊಂದು ಮೀನು, ಅಲ್ಲಿ ದೂರದಲ್ಲಿ ಬರ್‍ತಾ ಇದೆ, ಬರುತ್ತಿದೆ, ಬರುತ್ತಿದೆ ಹತ್ತಿರ ಬರುತ್ತಲೇ ಇದೆ, ಅಥವಾ ನಿಂತಿದೆಯೋ ?! ಇಲ್ಲ ಬೆಳೆಯುತ್ತಿದೆ, ಬೆಳೆಯುತ್ತಿದೆ, ಬೆಳೆಯುತ್ತಿದೆ ? ಗಾತ್ರವೇ ಅದನ್ನು ನನ್ನ ಹತ್ತಿರಕ್ಕೆ ತಂದುಬಿಟ್ಟಿತು. ಅದರ ಕಿಟಕಿಯಂತಾ ಕಣ್ಣುಗಳ ಹತ್ತಿರ ನನ್ನ ಮುಖ, ನೀರೇ ಗುಡುಗಿದಂತಾ ಶಬ್ದ, ಮೀನು ಮಾತಾಡಿತು. "ಯಾರು ನೀನು ?" "ನಾನು ?! ಮನುಷ್ಯ" "ಇಲ್ಲೇನು ಕೆಲಸ ?", ನಾನು ಮುಗುಳ್ನಕ್ಕು ಸುಮ್ಮನಾದೆ. ಉತ್ತರ ಬರದಿರುವುದನ್ನು ಕಂಡು ಮೀನು ಪುನಃ ಪ್ರಶ್ನಿಸಿತು. "ಮೇಲಿಂದ ಬಂದೆ ಏನು ?", ನಾನು ತಲೆ ಎತ್ತಿ ಮೇಲ್ನೋಡಿದೆ, ನೋಡಿದಷ್ಟೂ ಎತ್ತರಕ್ಕೆ ನೀರು, ಏನೂ ಗೊತ್ತಾಗದಿದ್ದರೂ, 'ಹೂಂ' ಎನ್ನುವ ಹಾಗೆ ತಲೆ ಆಡಿಸಿದೆ. ಮೀನು ಪುನಃ ಪ್ರಶ್ನಿಸಿತು. "ಬಂದ ಕಾರಣ ?" ನಾನು ತಪ್ಪಿತಸ್ಥನ ಹಾಗೆ ಅದರ ಕಣ್ಣನ್ನೇ ನೋಡುತ್ತಿದ್ದೆ. "ಬಂದ ಕಾರಣ ?" ಮತ್ತೊಮ್ಮೆ ಅಬ್ಬರಿಸಿತು ಮೀನು. ನಾನು ಉತ್ತರವಿಲ್ಲದೆ, ಅದನ್ನೇ ನೋಡಲು ಯತ್ನಿಸಿದೆ. ಅರೆ, ಮೀನಿನ ಕಣ್ಣು ಕಾಣಿಸುತ್ತಿಲ್ಲ. ಹೌದು, ಹೌದು, ಮೀನು ಕಾಣುತ್ತಿದೆ. ಸುತ್ತಲು ಶುರುಮಾಡಿತು. ಈಗ ಮೀನು ಬಹಳ ಚಿಕ್ಕದಾಗಿಬಿಟ್ಟಿತ್ತು. ಅದು ನನ್ನ ಸುತ್ತಲೂ ಸುತ್ತುತ್ತಿದ್ದರೆ, ನಾನು ನಿಂತಲ್ಲೇ ಸುತ್ತಲೂ ಅದು ನನ್ನ ದೃಷ್ಟಿ ತಪ್ಪಿ ಹೋಗದಂತೆ ಸುತ್ತಲೂ ಶುರುಮಾಡಿದೆ, ಸ್ವಲ್ಪ ಹೊತ್ತಿನ ನಂತರ ಏನೋ ನೆನಪಾಗಿ "ಜಾಗ ಬಿಡು ನಾ ಹೋಗಬೇಕು" ಎಂದೆ. ಮೀನು ಜೋರಾಗಿ ಸುತ್ತಲು ಶುರು ಮಾಡಿತು. ಪುನಃ ಬೆಳೆಯಲು ಶುರುಮಾಡಿತು. "ಎಲ್ಲಿಗೆ ?" ಎಂದಿತು ಮೀನು ಅದೇ ಗತ್ತಿನಲ್ಲಿ. ಥೂ ಇದ್ಯಾಕೋ ಸರಿ ಬರಲಿಲ್ಲ ಎಂದು ತಲೆ ಒದರುತ್ತಾ ನಾನು ಜೋರಾಗಿ "ಅದು ನಿನಗೇತಕ್ಕೆ ದಾರಿ ಬಿಡು" ಎಂದೆ. ಈಗಾಗಲೇ ಮೀನು ಭಯ ಬರಿಸುವಷ್ಟು ಗಾತ್ರಕ್ಕೆ ಬೆಳೆದಿತ್ತು. ಒಂದು ಗಳಿಗೆ ನನ್ನನ್ನೇ ದುರುಗುಟ್ಟಿ ನೋಡಿದ ಮೀನು ಮತ್ತೆ

ಕೇಳಿತು "ಯಾಕೆ ಹೋಗಬೇಕು ?" ಯಾತಕ್ಕೋ ಗೊತ್ತಿಲ್ಲ, ಮೀನು ನಗುತ್ತಿದ್ದ ಹಾಗೆ ಭಾಸವಾಯಿತು. ಒಂದು ಗಳಿಗೆ ನನ್ನ ಮೈ ನನ್ನ ಹತೋಟಿ ಮೀರಿ ನಡುಗಿತು. "ಏನಂತಹ ಅವಸರ ?" ಮೀನು ಪುನಃ ಕೇಳಿತು. ನಾನು "ಅಕ್ವೇರಿಯಂ ತೊಳೆಯಬೇಕು" ಎಂದೆ. ಬಾಯಲ್ಲೇನೋ ಬಂದದ್ದು ಇಷ್ಟೆ, ಆದರೆ ನೀರಿಗಿಟ್ಟ ಕರೆಂಟ್ ಮೂಲಕ ಹಾಯ್ದು ಕಿವಿ ಮುಟ್ಟುತ್ತಿದ್ದ ನನ್ನವೇ ಕೂಗು (ಈ ಕೂಗಿಗೆ ನಾಲಿಗೆಯಂತಾ ಪ್ರತ್ಯೇಕ ಇಂದ್ರಿಯದ ಅವಶ್ಯಕತೆ ಇರಲಿಲ್ಲ ಇಡೀ ಮೈಯೆ ಮೈಕಾಗಿತ್ತು) "ನಾನು ಮರ ಕಡಿಯಬೇಕು, ನನ್ನ ಪ್ರಿಯತಮೆಗೆ ಚರ್ಮ ಉಡಿಸಬೇಕು, ನದಿಗಳಿಗೆ ಕಾರ್ಖಾನೆಗಳ ಹೊಲಸು ಹರಿಬಿಡಬೇಕು, ಮೋರಿಗೆ ಎಣ್ಣೆ ಹೊಡೆದು ಸೊಳ್ಳೆ ಕೊಲ್ಲುವ ಹಾಗೆ ಪೂರಾ ಸಮುದ್ರಕ್ಕೆ ಎಣ್ಣೆ ಚೆಲ್ಲಿ ಅದರ ಗರ್ಭಪಾತ ಮಾಡಬೇಕು, ವಾಯುಮಂಡಲಕ್ಕೆ ತೂತಿಡಬೇಕು, ಬುದ್ಧಿಯಿಲ್ಲದ ಮುಂಡೇ ಗಂಡಸರಿಗೆ ಆಯುಧಗಳ ಸರಬರಾಜು ಮಾಡಬೇಕು, ಕೆಲಸವಿಲ್ಲದ ಕೆಲವರನ್ನು ಕೊಲ್ಲಬೇಕು, ನಮ್ಮ ಅಂಗಳದಲ್ಲಿ ನಾಯಿ ಸತ್ತು ಬಿದ್ದಿದೆ. ಅಗೋ ಅವನ ತಟ್ಟೆಯಲ್ಲಿ ನೊಣ ಬಿದ್ದಿದೆ ಎತ್ತಿಸೆಯಬೇಕು," ನನ್ನ ಮುಕಳಿಗೆ ಇಡಿದಿಡಿದು ಮಿದಿಯುತ್ತಿದ್ದಾರೆ ಶಾಂತಿ ಸಾರಬೇಕು. ಈ ಒಂದು ಕೆನ್ನೆ ಊದಿಸಿ ತಪ್ಪಿಸಿಕೊಂಡಿದ್ದಾನೆ. ಅವನ ಹುಡುಕಿ ಇನ್ನೊಂದು ಕೆನ್ನೆ ತೋರಿಸಬೇಕು, ಇದೆಲ್ಲದರ ಮಧ್ಯೆ ಬಿಡುವು ಸಿಕ್ಕಾಗ, ಪಕ್ಕದ ಮನೆಯವನು Discountನಲ್ಲಿ ಚೂರಿ ಮಾರುತ್ತಿದ್ದಾನೆ. ಕೊಂಡು ನಮ್ಮವರ್‍ಯಾರಾದರು ಕಂಡರೆ ಹಿಡಿದಿರಿಯಬೇಕು ಮತ್ತು ಹೀಗೆ ಇನ್ನೂ ದ್ರೌಪದಿಯ ಸೀರೆ ಉದ್ದಕ್ಕೂ ಸಾಲುವಷ್ಟು Schedule for a life ನನ್ನ ಕಿವಿ ತಮಟೆಗೆ ಹೊಡೆದು bounce ಆಗಿ (ನನ್ನ ಕೂಗುಗಳು) ನಮ್ಮ ಮೂಲ ಪೂರ್ವಜರನ್ನು (ಏಕಾಣು ಜೀವಿಗಳು, ಜಲ ಜೀವಿಗಳು) ಈಚೆ ಬಿಟ್ಟ ತಪ್ಪಿಗಾಗಿ ನಿಟ್ಟುಸಿರಿಡುತ್ತಿದ್ದ ನೀರಲ್ಲಿ ದಿಕ್ಕಿಲ್ಲದೆ ದೂರ ಸಾಗುತ್ತಿದ್ದವು. ಮೀನಿಗೆ ಇವೆಲ್ಲಾ ಕೇಳಿಸಿತೋ ಇಲ್ಲವೋ ಪುನಃ ಪ್ರಶ್ನಿಸಿತು. ನೀವು "ನಡೆದಾಡುವ ಜಾಗದಲ್ಲಿ ಹುಲ್ಲೂ ಬೆಳೆಯುವುದಿಲ್ಲವಂತೆ ?" ನನಗ್ಯಾಕೋ ನಗು ತಡೆಯಲಾಗಲಿಲ್ಲ. ನೀರು ಬುಳು ಬುಳು ಬೊಬ್ಬೆ ಏಳುವ ಹಾಗೆ ನಕ್ಕೆ. ದರಿದ್ರ ಮುಂಡೇದು, ನಾವು ಹುಲ್ಲು ಬೆಳೆಸಿರೋ ಲಾನ್‌ನಲ್ಲಿ (ಅದು ಭೂಮಿಗೆ ನಾವಿಟ್ಟ ತೇವಾಲಂಕಾರ ಒಂದು ತರಹ ಭೂಚರ್ಮ ರೋಗ) ನಡೆದಾಡಬಾರದು, ನಡೆದಾಡೋ ಜಾಗದಲ್ಲಿ ಹುಲ್ಲು ಬೆಳೆದರೆ ಚಾಣಕ್ಯನಿಗಿಂತ ಕಾಲುಗಂಟೆ ಜಾಸ್ತಿ ಸಮಯ ಕೀಳಬಹುದು ಎಂದುಕೊಳ್ಳುತ್ತಾ ನಗು ಬಿಗಿಹಿಡಿಯುತ್ತಾ ನಿಂತೆ, ಇದ್ದಕ್ಕಿದ್ದಂತೆ ಸಮುದ್ರಕ್ಕೆ ದೆವ್ವ ಹೊಕ್ಕಂತೆ ಶಬ್ದ. ಕತ್ತಲಾಗತೊಡಗಿತು, ಮೀನಿನ ಸುತ್ತಲೂ ಟಾರಿನ ಹಾಗೆ ಯಾವುದೋ ದ್ರವ ಸುತ್ತುವರಿಯಲು ಶುರುವಾಯಿತು, ಮೀನು ಚಿಕ್ಕದಾಗತೊಡಗಿತು. ರೆಕ್ಕೆಗಳ ಬಡಿಯುತ್ತಾ ತೊಪ್ ತೊಪ್ ಎಂದು ನೀರಿಗೆ ಬಿದ್ದ ಪಕ್ಷಿಗಳ ಸದ್ದು ಕೆಲವು ಕರ್ಕಶವಾಗಿ ತಮ್ಮ ಕೊನೆಯ ಕೂಗು ಕೂಗುತ್ತಾ ನನ್ನ ಕಿವಿಯೊಳಕ್ಕೇ ನುಗಿದವು. ಮೀನು ನೀರಿನಲ್ಲಿ, ನೀರೆಲ್ಲ ಯಾವುದೋ

ಕರ್ರನೆ ದ್ರವದಲ್ಲಿ ಒದ್ದಾಡುತ್ತಾ ಸಣ್ಣದಾಗುತ್ತಾ, ಒದ್ದಾಡುತ್ತಾ ಈಜಾಡುತ್ತಿತ್ತು, ನನ್ನ ಮೀನುಗಳ ಆಣೆ ನಾನು ಸುಳ್ಳಾಡಿದರೆ ನನಗೆ ನಿಜವಾಗಲೂ ಗೊತ್ತಿಲ್ಲ ನಕ್ಕೆ ಅಂತ ಜೋರಾಗಿ ನಕ್ಕೆ. ಟಾರಿಗೆ ಬೆಂಕಿ ಬಿದ್ದಂತಾ ದೃಶ್ಯ ಕಣ್ಣು ಮಿಟುಕಿಸುವಷ್ಟರೊಳಗೆ ಮೀನು ಕೊನೆಯ ಬಾರಿಗೆ ರಾಕ್ಷಸಾಕಾರ ತಾಳಿ ಬಾಯ್ತೆರೆದು ನನ್ನತ್ತ ಬಾಯಗಲಿಸಿತು. ಸತ್ತೆ ಎಂದುಕೊಂಡೆ. ಆದರೆ ಸಾಯಲಿಲ್ಲ. ಇನ್ನೂ ಎಲ್ಲ ಕಾಣಿಸುತ್ತಿದೆಯಲ್ಲಾ ?! ಉಸಿರಾಡಲು ಮಾತ್ರ ಪ್ರಾಣ ಹೋಗುತ್ತಿದೆ, ಇನ್ನಲ್ಲಿರಲಾಗಲಿಲ್ಲ. ನನಗೆ ಉಸಿರು ಕಟ್ಟುತ್ತಲೇ ಹೋಯಿತು. ಮೀನು ಕಚ್ಚಿ ಕೆಡುವಿದ್ದ ಆಕ್ಸಿಜನ್ ಟ್ಯೂಬು ನನ್ನ ಪಕ್ಕದಲ್ಲಿ ನೇತಾಡುತ್ತಿತ್ತು. ಉಸಿರು ಬಿಗಿ ಹಿಡಿದು ನೋಡುತ್ತಿದ್ದೆ. ಮೀನು ನನ್ನ ಸುತ್ತ ಸುತ್ತುತ್ತಲೇ ಇತ್ತು. ನಾನು ನೋಡುತ್ತಲೇ ಹೋದೆ, ನೋಡುತ್ತಲೇ ಹೋದೆ, ನನಗೆ ಇನ್ನು ಉಸಿರು ಕಟ್ಟಿ ನಿಲ್ಲಲು ಸಾಧ್ಯವಿಲ್ಲ ಎನ್ನುವ ಮಟ್ಟ ಮುಟ್ಟುತ್ತಲೇ ಎದೆಗೂಡಿನ ಬರ ಒಂದೇ ಎಳತಕ್ಕೆ ತೀರುವ ಹಾಗೆ, ಜೋರಾಗಿ, ಉಸಿರೆಳೆದೆ. ಸೊಳ್ಳೆ ಒಂದು ಕಿರುನಾಲಿಗೆಗೆ ರಾಚಿ ಮೆತ್ತಿಕೊಂಡಿತು. ಕ್ರಾವ್ ತೂ ! ಎಂದು ಜೋರಾಗಿ ಉಗಿದೆ. ಗಂಟಲೊಳಗೆ ಹೋದ ಸೊಳ್ಳೆ ಈಚೆ ಬರಲಿಲ್ಲ. ಹಾಳಾಗಲಿ ಬಿಡು (ನಾನು ಮೊದಲು ಮಾಸಂಹಾರಿಯಾಗಿದ್ದೆ) ಎಂದು ನನ್ನ ಸಮುದ್ರಕ್ಕೆ ಮೀಸಲಾಗಿಟ್ಟಿದ್ದ ನೀರನ್ನು ನನ್ನ ಬಾಯಿಗೆ ಸುರುವಿಕೊಂಡೆ, ಸೊಳ್ಳೆ ತೊಳೆದು ಕೃಷ್ಣಾಗ್ನಿ ಸೇರಿರಬೇಕು. ಇನ್ನೂ ನನ್ನ ಉಸಿರಿನ ರೇಷನ್ ನನ್ನ ವಶವಾಗಿರಲಿಲ್ಲ. ಕುಡುಕನಿಗೆ ತನ್ನ ಹೆಂಡತಿಯ ಮೇಲೆ ಉಕ್ಕುವ ಪ್ರೇಮದ ಹಾಗೆ, ಆಗಷ್ಟು ಈಗಷ್ಟು Instalmentನಲ್ಲಿ ಉಸಿರಾಡುತ್ತಾ, ಪ್ಲಾಸ್ಟಿಕ್ ಬಟ್ಟಲಲ್ಲಿ ಈಜಾಡುತ್ತಿದ್ದ ಮೀನುಗಳ ನೋಡಿದೆ. ಕ್ಯಾಕರಿಸಿ, (ಬಟ್ಟಲಿಗೆ ಉಗಿಯುವ ಬದಲು–ಆಮೇಲೆ ನಾನೇ ತೊಳೆಯಬೇಕಲ್ಲಾ) ದೂರಕ್ಕೆ ಬೇಲಿ ಯಿಂದಾಚೆ ಸಿಡಿಯುವ ಹಾಗೆ ಉಗಿದೆ. ದಿಟ್ಟಿಸಿ ನೋಡಿದರೂ ಮೂರೇ ಮೀನು, ಇನ್ನೊಂದೆಲ್ಲಿ ?ಬಾಟಲ್ ಕಾಲಿಯಾಯಿತು ಸ್ಟೂಲಿನಿಂದ ಕೆಳಕ್ಕೆ ಹೋದ ಕಣ್ಣುಗಳು ಅಲ್ಲೆ ಸ್ವಲ್ಪ ಹೊತ್ತು ನಿಂತವು. ಒಣಗಿದ ಸೀಗಡಿಯ ಹಾಗೆ ಮೀನು ಬಿಲ್ಲಾಗಿ ಬಾಗಿತು.

ತಿಕಕೊಬ್ಬು ಹೆಚ್ಚಾಗಿ ಬಟ್ಟಲಿಂದ ಎಗರಿ ಕೆಳಗೆ ಬಿದ್ದಿರಬೇಕು ಎಂದುಕೊಳ್ಳುತ್ತಲೇ ಎತ್ತಲಿಂದಲೋ ಟಾರಿನ ವಾಸನೆ ಒಲ್ಲದ ಗಾಳಿಯನ್ನು ತಳ್ಳಿಕೊಂಡು ಬಂದು ಮೂಗಿ ನೊಳ್ಳೆಯ ಇಣುಕಿತು, (ವಾಯುಮಂಡಲದಲ್ಲಿ ಗಾಳಿ ಕಮ್ಮಿಯಾಗಿರಬಹುದೇ ?) ತಲೆ ಸುತ್ತಿದಂತಾಯಿತು. ಟಾರ್ ವಾಸನೆಯ ಈಚೆ ದಬ್ಬಲೋ ಅಥವಾ ಇನ್ಯಾವ ಕಾರಣ ದಿಂದಲೋ ಅರ್ಧದಾರಿ ಒಳಹೊಕ್ಕ ಗಾಳಿ ನಿಟ್ಟುಸಿರಾಗಿ ಈಚೆ ಬಂತು. ಅವಶ್ಯಕತೆ ಎಂತಹದ್ದೇ ಆಗಿರಲಿ, ಸಾವು ಜೀವಿಗಳ ನಿರ್ಣಯವೆ ಮುಂದಿದ್ದರೂ, ಅವಕಾಶರಹಿತ ಅವಶ್ಯಕತೆಯ ಇಕ್ಕಟ್ಟಿನಲ್ಲಿ, ಸಾಹಸದ ಪರಮಾವಧಿ ಫಲ ಸಾವಾಗಬಲ್ಲುದೆ ವಿನಃ, ಮೀನು ಗಾಳಿಯಲ್ಲಿ ಉಸಿರಾಡಬಲ್ಲದೇ ? (ಮತ್ತೆ, ಮೀನೆಲ್ಲಿಗೆ ಹೋಗಬೇಕು ?) ಅವಕಾಶಗಳ ಚೌಕಟ್ಟಿನಲ್ಲಿ ಅವಶ್ಯಕತೆಗಳ ರೂಡಿಸಿಕೊಂಡಲ್ಲಿ ಮಾತ್ರ ಈಗ ಯಾವು

ಯಾವುವು ಎಲ್ಲೆಲ್ಲಿವೆಯೋ ಅಲ್ಲಲ್ಲೆ ಅವು ಉಳಿದಾವು, ಇಲ್ಲಾ, ಅವಕಾಶ ಅವಶ್ಯಕತೆಗಳ ಮಂಥನದಲ್ಲಿ ಉಕ್ಕುವ ಕುತೂಹಲದ ಜೀರ್ಣಿಸಲು ಉಳಿಯಲು, ಅಲ್ಲಿ ಉಸಿರಾಡಲು, ಎಲ್ಲ ಜೀವಿಗಳನ್ನು ವಿಷ ಜಂತುಗಳಾಗಿ (ಆ ವಿಷ ಉಂಡೂ ಬದುಕುವಂತೆ) ಮಾರ್ಪ ಡಿಸಲು ಪ್ರಕೃತಿಗೆ ಬೇಕಾಗುವಷ್ಟು ಕಾಲ ನಾವು ಉಸಿರು ಬಿಗಿಹಿಡಿಯಬಲ್ಲೆವೆ ? ಈ ಜೀವರಹಿತ ಆಕಾಶ ಕಾಯದ ಮೇಲೆ ಯಾವುದೋ ಸೂಕ್ಷ್ಮ ಆಕಸ್ಮಿಕದ ಕೂಸಾಗಿ ಜೀವ ಪಡೆದ ನಾವು (ಜೀವರಾಶಿ) ಆ ಸೂಕ್ಷ್ಮ ಸಮತೋಲನವನ್ನೇ ಪಣಕ್ಕಿಟ್ಟು ಕಣ್ಮುಚ್ಚಿ ಜೂಜಾಡಿದರೆ, ಒಂದಲ್ಲಾ ಒಂದು ದಿನ ಈ ಗೋಲದ ಸಂಪೂರ್ಣ ಜೀವರಾಶಿಯನ್ನು ತೊಳೆದು, ಬರೀ ಮಣ್ಣಿ ಉಂಡೆಯನ್ನು ಆಕಾಶದಲ್ಲಿ ತೇಲಿ, ಬಿಟ್ಟ ಹಾಗೆಯೇ ಈ ಕೊಬ್ಬಿಗೇನನ್ನ ಬೇಕು. ಕಾಡಲ್ಲಿ, ನೀರಲ್ಲಿ, ಗಾಳಿಯಲ್ಲಿ ಅಲೆದಾಡುವ ಜೀವ ಜಂತುಗಳು ರೆಫ್ರಿಜಿರೇಟರ್ ನಿಂದ Ice Creem ಕದ್ದು ತಿಂದಿದ್ದುವೆ ? Super sonic jet ಗಳ 'ಓಡಿಸಿ' ವಾಯುಮಂಡಲಕ್ಕೆ ತೂತಿಕ್ಕಿದ್ದುವೇ ? ಭೂಮಿಗೂ ಚಂದ್ರನಿಗೂ ಮಧ್ಯೆ ಇರುವ ಜಾಗವನ್ನು ಮೋರಿ ಮಾಡಿಕೊಂಡು ದಾಟಲು ಹವಣಿಸಿದವೆ ? ಕಾಡ ಕಡಿದು ನಾಡಿಗೆ ಬರ ತಂದಿದ್ದುವೆ ? ಸಲೀಸಾಗಿ ಹರಿಯುವ ನೀರ ತಡೆಗಟ್ಟಿ ಕೂಡಿಟ್ಟು ಭೂಕಂಪಗಳ ಹುಟ್ಟಿಸಿದುವೆ ? ಚಿವುಟಾದ ಮೇಲೆ ತೊಟ್ಟಿಲಾಡಿಸುವ ಹಾಗೆ, ಎಲ್ಲಾ ಮಾಡಿಬಿಟ್ಟು ENDANGERED ಆದಕ್ಕೇ ಸಂರಕ್ಷಿಸುತ್ತೇವೆ. ಎಂದು ತನ್ನದೇ ಆದ ಗತಿಲಯದಲ್ಲಿ ಬೆಳೆಯುತ್ತಿದ್ದ ಜೀವಿಗಳ ತಂದು ಬೆಲಿಕಟ್ಟಿ ಕೂಡಿಹಾಕಿ ಹಸ್ತ ಮೈಥುನ ಕಲಿಸಿದ್ದುವೆ ? ಇದ್ಯಾವುದೂ ಇಲ್ಲದ ಮೇಲೆ ಜೀವರಾಶಿಯಲ್ಲಿ ಒಂದು ತೃಣಾಂಶವೂ ಅಲ್ಲದ ನೀನು, ಅವುಗಳ ಅಳಿವುಳಿವುಗಳ ನಿರ್ಧರಿಸುವಂತಾ ಜೀವನವನ್ನು, ಮನೋಧರ್ಮವನ್ನು ಪಾಲಿಸುತ್ತಿರುವುದು ಸರಿಯೇ ಎಂದು ಪ್ರಶ್ನಿಸಲಾದರೂ ನಾಚಿಕೆ ಬೇಡವೇ ? ಸಹಸ್ರಾರು ವರುಷಗಳಿಂದ ಪ್ರಕೃತಿ ಶ್ರಮವಹಿಸಿ, ಕಟ್ಟಿ ಹರಸಿದ ಗುಡಿಗೆ ಹೊಗೆ ತುಂಬಿ ನಾವು ಎಷ್ಟು ಹೊತ್ತು ಉಸಿರು ಬಿಗಿ ಹಿಡಿಯಬಲ್ಲೆವು ? ಜೀವಗಾಳಿ ಇನ್ನು ಶೂನ್ಯವೇ ?!

ಯಾವುದೋ ಬೇಲಿಗೆ ಭೇಟಿಕೊಟ್ಟ ಅಜ್ಞಾತಪಕ್ಷಿ ಏನೋ ಉತ್ತರಿಸಿತು. ನನ್ನ ಮುಂದೆ ಸಿಪಾಯಿಗಳ ಹಾಗೆ ಸಾಲಾಗಿ ನಿಂತ ಬಾಳೆ ಮರಗಳು ರೆಕ್ಕೆ ಬೀಸಿ ಗಾಳಿಗೆ ಜೀವ ಇಟ್ಟವು. ಬೇಲಿಯಲ್ಲಿದ್ದ ಪುಟ ಪಕ್ಷಿ ಹಾರಿ ನೀಲಿ ಚುಂಬಿಸಿತು. ಎದೆ ತುಂಬಾ ಪ್ರಾಣ ತುಂಬಿಕೊಂಡೆ, ಕೈ ಹಿಡಿದಿರುವುದ ಕೊಡದ ಮಗುವಿನ ಹಾಗೆ, ಗಾಳಿಯನ್ನು ಹಾಗೇ ಎದೆ ತುಂಬಿಕೊಂಡು ಸುತ್ತಲೂ ನೋಡಿದೆ, ಮುಸ್ಸಂಜೆಯಾಗಿತ್ತು. ಮೂರೂ ಮೀನು ದುಂಡನೆ ಗಾಜಿನ ಪಾತ್ರೆಯಲ್ಲಿ, ಕಳಕಳಿಸುವ ಪುಟ್ಟ ಜಲಸಸ್ಯದ ಚಿಗುರುಗಳ ನಡುವೆ ನಲಿಯುತ್ತಿದ್ದವು–ಕೃತಜ್ಞತೆಯಿಂದ ನಲಿಯುತ್ತಿದ್ದವು.

(ಇನ್ನು ಮುಂದೆ ಶಬ್ದವಿಲ್ಲ–ಸಂಕಲನದಿಂದ
ಕೃಪೆ : ಕನ್ನಡ ಸಂಘ, ಕ್ರೈಸ್ಟ್ ಕಾಲೇಜು)

# 'ಗೌರಿ ಬಂದಳು ಯಾತರ ಮ್ಯಾಲೆ ?'

ಎಂ. ಎಸ್. ವೇದಾ

ಹಟ್ಟಿಯ ಮುಂದಲ ಸೀನೀರ ಬಾಂವಿಯ ರಾಟೆಯ ಗಡಗಗಡ ಸಬುದ ಹಜಾರದ ಮಂಚದ ಮ್ಯಾಲೆ ಮನಗಿದ್ದ ಟೇಜೂನನ್ನು ಮೆಲ್ಲಗೆ ತಿವಿಯಿತು. ಕಣ್ಣು ಬುಟ್ಟ ಟೇಜೂ ಕಂಬಳಿಯ ಸಣ್ಣರೆ ತೂತುಗಳಿಂದ ತೂರಿ ಬಂದು ಸೂರ್ಯ ಸಾಮಿ ನಿರುಮಿಸಿದ ಚಿನ್ನಾರಿ, ಬ್ಯಾಗಡೆಗಳ ಲೋಕವನ್ನು ಕಂಡವಳಾಗಿ ಸದ್ದಾಗದಂತೆ ಕಿಸಕ್ಕನೆ ನಕ್ಕುಕೊಂಡು ಕತ್ತಲ ಕಂಬಳಿವೊಳಗೆ ತೂರಿ ಬರುವ ಸೂರ್ಯನ ಕಿರಣಗಳ ತಡೆವಂತೆ ಎರಡೂ ಕೈಗಳ ಎತ್ತಿ ಸಂದುಗಳತ್ತ ಇಡ ಹೋದವಳು ಗಕ್ಕನೆ ಮೌನವಾಂತು ತನ್ನ ಕೈಗಳಲ್ಲಿ ಸೋಬಿಸುತ್ತಿದ್ಧ ಸಿರಿದೇವಿ ಬಳಗಳ ಮೋಹಕತೆಯಲ್ಲಿ ಮುಣುಗಿ ಹೋದಳು. ಆ ತನಕ ಅವಳಿಗೆ ನೆನ್ನೆ ಸನಿವಾರ ಸಂತೆಯಲ್ಲಿ ತಾತ ತನಗೆ ಕೊಡುಸಿದ, ತಾನು ಕೊಟ್ಟ ಗನಂದಾರಿ ಬಳಗೊಳ ನೆನಪು ಇಂಕರವೂ ಇರಲಿಲ್ಲ. ನಿದ್ದೆ ಕಳದ ಮರುಗಳಿಗೆಯಲ್ಲಿಯೇ ನೆನ್ನೆ ಮನಗುವ ತನಕ ಕಾಡಿದ್ದ ಬಳಗೊಳ ಮೋಹಕತೆ ಮತ್ತೆ ಅಮರಿಕೊಳ್ಳಲಾಗಿ ನೆನ್ನೆ ಜಿನಾ ತಾತನೊಂದಿಗೆ ಸಂತೆಗೆ ಹೋಗಿದ್ದು, ಅಲ್ಲೆಲ್ಲಾ ಅಡ್ಡಾಡಿದ್ದು, ಜನಾ 'ಹಿರೀ ಮೊಮ್ಮಗಳಾ, ಇದರವ್ವಾ ಹಬ್ಬುಕ್ಕೆ ಇನ್ನೂ ಬರ್ನಿಲ್ವಾ ಕಾಣೆ' ಎಂದು ಹತ್ತಾರು ಬಾರಿಯಾದರೂ ಕೇಳಿದ್ದು. ಬ್ಯಾವಿನ ಮರುದ ಕೆಳಗೆ ಬಳಗಳು, ಟೇಪು, ರಿಬ್ಬನ್ನುಗಳು–ಇತ್ಯಾದಿಗಳ ಹರಡಿ ಕುಂತುಕೊಂಡಿದ್ದ ಸಾಬರ ವುಡುಗ, ತಾನು ಮೆಚ್ಚಿದ ಬಳಗೋಳ ಮೋಹದಿಂದ ನೋಡುತ್ತಿರಲಾಗಿ 'ಸಿರಿದೇವಿ ಬಳ ವುಡುಗಿ, ಛಂದ ಐತೇ, ತಗೋರಿ' ಎಂದು ಕಣ್ಣುಗಳಾಗೆ ನಕ್ಕಿದ್ದು, ಹಾಗಾಗಿ ನೆನ್ನೆ ಜಿನಾ ಕೊಂಡ ಬಳೆ ಇವತ್ತಿಗೂ ಅವುಳನ್ನ ಸಂಭ್ರಮಕ್ಕೆ ತಳ್ಳಿದ್ದು...ನೆನೆ ನೆನೆ ಕಂಡು ಟೇಜೂ ಮತ್ತೊಮ್ಮೆ ವಾಲಾಡುವಂತೆ ನಗುವ ಕಿಸಕ್ಕನೆ ನಕ್ಕುಗೊಂಡಳು. ಅವುಳ ಪ್ರಯತ್ನವನ್ನೂ ಮೀರಿ ಸದ್ದು ಹೊರಟು ಬಾಯನ್ನು ಗವಕ್ಕನೆ ಅಮುಕಿಕೊಂಡಳು "ಗಾಚಾರ ಚೆನ್ನಾಗದೆ ಅಜ್ಜಿಗಾ ತನ್ನ ನಗು ಕ್ಯಾಳ್ಲೆ ಇಲ್ಲ. ಅದ್ಸರಿ ಈಪಾಟಿ ವತ್ತಾಗಿದ್ರೂ ಅಜ್ಜಿ ಯಾಕಾ ಕಾಣೆ ಇವೊತ್ತು ಇನ್ನೂ ನನ್ನ ಯಾಳೂಂತ ತಿವುದು ಎಚ್ಚರಿಸನಿಲ್ಲ ಕಾಣೆ" ಎಂಬ ಅಚ್ಚರಿಯ ಮ್ಯಾಲೆ ಅಲುಗಾಡದೆ ಮತ್ತೆ ಕಣ್ಣು ಮುಚ್ಚುಕೊಂಡಳು. ಬಳಗಳ ಮೋಹಕತೆಯಿಂದ ಹೊರಬಂದ ಟೇಜುವಿಗೆ ರಾಟೆಯ ಗಡಗಡ ಸದ್ದಿನೊಂದಿಗೆಯೇ ಅಜ್ಜಿಯ ಮಾತುಗಳೂ ಕಿವಿಗ ಬೀಳ ತೊಡಗಲಾಗಿ......

"ಈ ವರ್ಷ ಯಾತರ ವ್ಯಾಲೆ ಬಂದಳೋ ಕಾಣೆ ಗೌರಿ" ಅಜ್ಜಿ ಬಹಳವೇ ನಿಟ್ಟುಸುರು ಬುಡುತ್ತಾ ತಮ್ಮ ದುಕ್ಕುವ ತಾತನೆಡೆಗೆ ವರ್ಗಾಯಿಸಿದ್ದರು. ತಾತ ಜವಾಬು ಕೊಟ್ಟಂತೆ ಕ್ಯಾಳಿ ಬರನ್ನಿಲ್ಲಾ. ತಾತ ಹಲ್ಲುಗಳಿಗೆ ಹಂಚಿಕಡ್ಡಿಯು ಯೆಟ್ಟು ತ್ತಿರಬ್ಬೈಕು. ಟೇಜು ಅಂದುಕೊಂಡಳು. "ವಾದ್ ಬಾರಿ ಬಿದಿರ ವ್ಯಾಲೆ ಬಂದಿದ್ಳು. ಯಾಪಾಟಿ ಸಾವು ನೋವು ವೂರ್ನಾಗೆ..." ಪಡಸಾಲೆಯು ವ್ಯಾಲೆ ಕುಂತ ಅಜ್ಜಿ ಬಹಳವೇ ಬೇಸರಿಕೆಯಿಂದ ನುಡಿದರು. ಎಷ್ಟೋ ವೊತ್ತಾದ ನಂತರ ಅಜ್ಜಿ ಬಾಯಿ ಬಾಯಿ ಬಿಟ್ಟವರಾಗಿ "ನಮ್ಮನ್ಯಾಗೆ ಏನ್ ಕಡಿಮ್ಯಾ. ಮರ್ಣ ಬಂದ್ರಾ ವಂದ್ ಬಾರಿ ಆಕ್ಲಾಸಾ ತೀರಾಪ್ಪು ಅತ್ಗಂಡು, ಸತ್ತೋರ ಬಾಯಿಗ್ ಮಣ್ಣಾಗಿ ಸಮಾಧಿ ಮಾಡಿ ವಟ್ಟೆ ವ್ಯಾಲೆ ತಣ್ಣೀರ್ ಬಟ್ಟೆ ಹಾಕ್ಕೊಂಡು ಇದ್ದುಬುಡಭೈದು. ಆದ್ರೆ ಈ ರಣಹಿಂಸೆ ಬ್ಯಾಡಾ ಕಾ ಮಾದೇವಿ"

"ಅಜ್ಜನ ಗೊರಗೊರ ಸದ್ದು ನಿಂತುವೋಗಲಾಗಿ ಅವರು ಅಳುತ್ತಿರಬಹುದೇ ಎಂಬ ಗುಮಾನಿ ಟೇಜೂಗೆ ಬಂದಿತು. ಆಪಾಟಿ ಜೋರು ಜಬರ್‌ದಸ್ತು ತೋರುವ ತಾತನಿಗೇನು ಅಂತಹಾ ಅಂತಹಾ ದುಕ್ಕ !

"ನಮ್ಮ ಗೌರಿ ಯಾವತ್ತಾ ಬಂದಳೋ ಕಾಣೆ. ಈ ಸಲವಾದ್ರೂ ಕಿವಿನಾಗೆ ವಾಲೆ ಇಟ್ಕಂಡು ಬಂದಳೋ ಇಲ್ಲವೋ ಕಾಣೆ" ಅಜ್ಜಿ ಮುಸುಗುಡುತ್ತಾ ನುಡಿದ ತಕ್ಷಣ ಟೇಜೂಗೆ ತನ್ನವ್ವನ ನೆನಪಾಯಿತು. ಇದ್ದಕ್ಕಿದ್ದಂತೆ ಅವುಳ ಗಂಟಲಲ್ಲಿ ಇಕ್ಕುಳ ತುರುಕಿದಂತಾಗಿ ಬಿಕ್ಕಳಿಕೆ ವರ ಬಂತು. ದಬದಬ ಮೂರು ವೊತ್ತು ಗುದ್ದುವ ಅಪ್ಪಾ. ಅನ್ನದ ಅಗುಳನ್ನೇ ಕಾಣದ ಪಾತ್ರೆಗಳು, ನೀರು ಕುಡಿದೇ ಕಳೆದ ಹಗಲು, ಸಂಜೆಗಳು, ಪೀಜು ಕಟ್ಟದೆ ಸಾಲೆಯಿಂದ ವರ ನಿಂತು ಬಿಸುಲು ಕಾದ ದಿನಗಳು. ಅವ್ವನ ನಿರಂತರ ಮುಸು ಮುಸು ಅಳು, ತಮ್ಮನ ಹಸುವಿನ ಆಕ್ರಂದನ, ಇವುಗಳ ವ್ಯಾಲೆ ಎಲ್ಲಕ್ಕೂ, ನಾಕೆಳೆ ತಿಗುಣೆ ಚೈನು ಹಾಕಿ ವಿರಾಜಮಾನಳಾಗಿದ್ದ ಕೊಡಗಿನ ಹೆಂಗುಸಿನ ಜೊತೆಗಿನ ಅವ್ವ ಹೇಳಿಕೊಂಡು ಅಳುವ ಅಪ್ಪನ ಸಂಬಂಧ...

ಆವರೆಗೆ ಕನಸಿನ ಲೋಕದಲ್ಲಿ ಕಿಸಕ್ಕನೆ ನಗುತ್ತಾ ವಾಲಾಡಿದ್ದ ಹದಿಮೂರರ ಟೇಜುವಿನ ಕಂಗಳಲ್ಲಿ ಸೂರ್ಯನ ಕಿರಣಗಳೆಲ್ಲಾ ಕರಗಿ ಕಂಬಳಿಯು ಕಪ್ಪೊಂದೇ ಉಳಿಯಿತು.

"ಅದೆಲ್ಲಂತಾ ಆ ಶಿವಾ ನನ್ನ ಮಗೀಗೆ ಆ ರಾಕ್ಷಸನ್ನ ಅಂಟಾಕ್ದ. ಅದೆಷ್ಟ ಜಲ್ಮದ್ ಪಾಪ ಮಾಡಿತ್ತು ನನ್ನೆಣ್ಣು. ಮದಿವಿಯಾದಾಗಿಂದ ಇವೊತ್ತಿನ್ ತಂಕಾ ಅಗ್ದು ವುಣ್ಣಾಕ್ ಬುಡ್ನಿಲ್ಲ. ನಿಗ್ದು ತಿರುಗಾಡಾಕ್ ಬುಡ್ನಿಲ್ಲಾ. ವ್ಯಾಲೆ ಗಾಂಡು ಸೋಕಿ ಬ್ಯಾರೆ. ಹತ್ತಾರ ಸಾವ್ರ ಸುರಿ ಅಂಗ್ಡಿ ಇಡು ಇಂವಾ ಎಲ್ಲ ನೆಕ್ಕು, ಹತ್ತಾರ ಸಾವ್ರ ಸುರಿ ಅಂಗ್ಡಿ ಇಡು ಇಂವಾ ಎಲ್ಲ ನೆಕ್ಕು – ಇದೇ ಆಗೋಯ್ತಾ ಅವ್ನ ಅಣೆ ಬರಾ. ವಾಗ್ಲಿ ವಳ್ಳೇತನಾನಾರ ಇದ್ದದಾ. ಮೈಯೆಲ್ಲಾ ಸುಳ್ಳು. ಸಿವಾ ಸಿವಾ

ಆದ್ಯಾವ ಸೂಳಮಗ ಅವುನ್ ಬಾಯ್ಗ ಬೆಟ್ಟು ಹಾಕುದ್ನೋ ? ಮೈಯೆಲ್ಲಾ ಸುಳ್ಳು. ಇವೆಲ್ಲಾ ಸಾಲ್ದೂಂತ ಹಾದ್ರುತನ. ನಮ್ ಗೌರಿ ಹೆಂಗಿತ್ತು. ಕೈ ತೊಳ್ದು ಮುಟ್ಟ ಹಂಗಿತ್ತು. ಮೂಳ ಚಕ್ಕಳ ಮಾಡಿಬುಟ್ನೋನೆ. ಮೊದ್ಲೆ ಸುಂದರ ಮ್ಯಾಲೆ ಮೆಳ್ಳಗಣ್ಣು ಅಂತಿದ್ರು ಹಂಗೆ ಇವೆಲ್ಲಕ್ಕೂ ಸಿಕುರದಂಗೆ ಕೊಡಗುನ್ನ ಹೆಂಗುಸನ್ನ ವಡನಾಟ" ವಂದೇ ಉಸುರಿಗೆ ಅಳಿಯನ ಆಚಾರ ವಿಚಾರಗಳ ಗಟ್ಟು ವಡೆದಂತೆ ನುಡಿದು ಸುಸ್ತಾಗಿ ಸುಮ್ಮನಾಗಿಬುಟ್ಟರು ತಾತ.

"ನನ್ನ ಕಂದಾ ವಸಾ ಸೀರೆ ವುಟ್ಕಂಡು ಕೈ ತುಂಬಾ ಬಳ ಹಾಕ್ಕಂಡು ಕಾಲ್ಗಜ್ಜೆ ಝುಲ್ ಝುಲ್ ಅನ್ನಿಸ್‌ಕಂಡು ವಾಡಾಡ್ತ ಇದ್ದರೆಯೇ ಒಂದು ಚೆಂದಿತ್ತು. ಈಗ್ಲೂ ಬತ್ತದೆ. ಕಿವಿಗಿಲ್ಲ, ಮೂಗಿಲ್ಲ. ಅವ್ನಿಗೆ ಮಾರಣ ಬರಾಂವಾ ಧಾರೆಸೀರ್ನ್ಯಾ ಅಡಾ ಇಟ್ಕಂಡೋನಂತಲ್ಲಾ. ಅಪುಕ್ಕಿಂತ ಬ್ಯಾರೆ ಬೇಕಾಗದ ಕೇಡು." ಅಜ್ಜಿ ಗೋಳೋ ಎಂದು ಅಳತೊಡಗಿದರು. "ನನ್ನ ಮುಗ್ಳು ವರುಸಕೊಂದು ಹಬ್ಬಾನೂ ನೆಟ್ಟುಕ್ಕೆ ಮಾಡುವಂಗಿಲ್ಲ. ಅರಗಿಣಿ ಸಾಕಿ ಹದ್ದುಗ್ ಕೊಟ್ಟಂಗಾಯ್ತು ನಮ್ಕಥೆ. ಮುಖ್ಯಾ ಅವುಳು ಹಣೇಬರಾವು ಸರಿಯಿಲ್ಲ. ಅದ್ನೆಲ್ಲಾ ನೋಡ್ಕಂಡು ಇನ್ನೂ ಬದುಕಿರ ಭೈಕಂತಾ ಬರ್ದೋನಲ್ಲ ಆ ಸಿವಾ ನಮ್ಮ ಹಣೇಬರಾವೂ ಸರೀಯಿಲ್ಲ."

ಟೇಜುವಿನ ವಾಲಾಡುವಿಕೆ ಕರಿಕಂಬಳಿಯೊಳಗೆ ಸಂಪೂರ್ಣ ಸ್ತಬ್ಧವಾಗಿ ಬಿಟ್ಟಿತು. ಸನಿವಾರ ಸಂತೆಯ ಓಡಾಟ, ಸಾಬರ ವುಡುಗನ ಕಂಗಳ ನಗು, ಬಳಗಳು ಸೃಷ್ಟಿಸಿದ ಮೋಹಕತೆ. ಸೂರ್ಯ ಕಿರಣಗಳು ಬಿಡಿಸಿದ ಮಾಯಾಲೋಕ ಎಲ್ಲವೂ ಕರಗಿ ಕರಗಿ ನೀರಾಗಿ ಕಂಬಳಿಯನ್ನು ಮುಖದ ಮ್ಯಾಲಿಂದ ತೆಗೆದಳು. ತೊಟ್ಟಿಯಲ್ಲಿ ಬಿದ್ದು ಮುಖಕ್ಕೆ ರಾಚಿದಂತಾದ ಬಿಸಿಲ ಝಳವನ್ನು, ಬೆಳಿಗ್ಗೆ ಕೇವಲ ಬೆಳಿಗ್ಗೆ ಏಳರ ಸೂರ್ಯನ ಬಿಸಿಲ ಝಳವನ್ನೇ ಅವಳ ಪುಟ್ಟ ಕಂಗಳು ಎದುರಿಸಲಾಗಲಿಲ್ಲ. ತಲೆ ತಗ್ಗಿಸಿ ತೊಟ್ಟಿಯಲ್ಲಿ ಬೆಳಗಲು ಇಟ್ಟಿದ್ದ ಪಾತ್ರೆಗಳತ್ತ ನಡೆದಳು.

* * *

ಮೂರನೆಯ ದಿನವೇ ಗೌರಮ್ಮ ಬರುವವಳಿದ್ದಳು. ವೂರಿಗೆ ಮುಕಂಡರಾದ ತಾತ ತಮ್ಮೆಲ್ಲಾ ನಿಟ್ಟುಸಿರುಗಳ ದೂರವಿಟ್ಟು ನೆನ್ನೆ ಜಿನಾ ಗೊರಗೊರ ದನಿ ವರಡಿಸುತಾ ಪಡಸಾಲೆಯ ಮ್ಯಾಲೆ ಕೈ ಚೆಲ್ಲಿ ಕುಂತ ತಾತ ಇವರೆಯಾ ಎಂದು ಮೂಗ ಮ್ಯಾಲೆ ಬೆಳ್ಳಿಡುವಂತಾಗಿ ಓಡಾಡುತ್ತಿದ್ದರು. ಅಜ್ಜಿ ವಬ್ಬಟ್ಟಿಗೆ ವೂರಣ ಅಡಿಸುತ್ತಿದ್ದರು. ಅತ್ತೆ ಆಗಲೇ ಗವ್ವೆನ್ನುವ ಅಡುಗೆ ಕ್ವಾಣೆ ವಕ್ಕಾಗಿ ಎಷ್ಟೋ ತಾಸುಗಳು ಕಳೆದಿದ್ದುವು.

"ಅತ್ತೋ ವಸಿ ತಲೆ ಬಾಚ್ಕೊಡಿ ಬನ್ನಿ. ತಾತಾ ಬೈಯ್ತಾ ಅವ್ರೆ. ಸಿಂಗಾರ ಯಿನ್ನೂ ಮುಗೀನಿಲ್ವಾಂತ" ಕ್ವಾಣೆಯ ವರಗಡೆ ನಿಂತು ಕೂಗಿಕೊಂಡಳು ಟೇಜೂ. 'ಅವ್ವಯ್ಯಿ ತಡೀ ತೇಜೂ ನಾ ಯಾನ್ ಆಟಾ ಆಡ್ತಾ ಇಂವ್ನಾ. ನಾಕೈ ಇದ್ದವಾ ನಂಗೆ. ವತ್ತಾದ್ರೆ ನೀರ್‌ಗಂಟ್ ಹಾಕ್ಕೊಂಡ್ ವಾಗಿರು ಬಂದ ಮ್ಯಾಗೆ ಬಾಚ್

ಕೊಟ್ಟೇನು" ಅತ್ತೆ ಸುಂದರವಾಗಿ 'ತೇಜೂ' ಎಂದು ಕರೆದು ಅಷ್ಟು ಮಾತಾಡಿದ್ದೇ ಟೇಜೂಗೆ ಖುಸಿ ಕೊಟ್ಟು ಬುಟ್ಟಿತು. ಅತ್ತೆಯ ಆಜ್ಞೆಯನ್ನು ಶಿರಸಾವಹಿಸಿದವಳಾದಳು.

ಅಜ್ಜಿಯ ಸಡಗರವೂ ನೋಡುವಂತೆಯೇ ಇತ್ತು. ತಮ್ಮ ಹಳೇದಾದ ರೇಸುಮೆ ಸೀರೆಯಿಂದ ಹಲೆಸಿದ ಲಂಗ ಜಂಪಸುಗಳ ಹಾಕುವುದರಿಂದ ಹಿಡುದು ಮೊನ್ನೆ ತಂದಾ ವಸಾ ಟೇಪು, ರಿಬ್ಬನ್ನುಗಳ ತೊಡುವ ತನಕಾ ಮೊಮ್ಮಗಳಿಗೆ ಕುಂತಲಿಂಡಲೇ ವರಾತ ಹಚ್ಚಿದ್ದರು. ತಾತನ ಕೈಹಿಡುದು ವರಡಬೇಕೆನ್ನುವ ವೇಳೆಗೆ ಜೋರ್ರನೆ ಮಳೆ ಸುರಿಯಲು ಆರಂಭವಾಗಿಬುಟ್ಟಿತ್ತು. ತಾತ ಚಡಾವು ಬುಟ್ಟು ಹಜಾರದ ಮಂಚದ ಮ್ಯಾಗೆ ಪುನಾ ಆಸೀನರಾಗಲು, ತನ್ನ ರೇಸುಮೆ ಲಂಗವ ಗೆಳೆತಿಯರಿಗೆ ತೋರುವ ಸಮಯವು ಸನ್ನಿಹಿತವಾಗಿ, ಮತ್ತ ಅಷ್ಟು ದೂರ ಓಡಿ ಹೋದಂತಾಗಲು ಟೇಜು ಹಜಾರಕ್ಕೂ, ತಲೆಬಾಗಿಲಿಗೂ ಓಡಾಡತೊಡಗಿದಳು.

"ಅದೆಲ್ಲಿತ್ತಾ ಕಾಣೆ ಮಳೆ. ವೋ ಗೌರಮ್ಮ ಅಳ್ತಾ ಅಳ್ತಾ ಬತ್ತಾ ಅವ್ಳೆ. ನಗ್ತಾ ನಗ್ತಾ ಬತ್ತಿಲ್ಲ" ಅಜ್ಜಿ ನೆನಪಾದವರಂತೆ ಮತ್ತೊಮ್ಮೆ ನಿಟ್ಟುಸಿರಿಟ್ಟು ಕೈ ಚೆಲ್ಲಿದರು. "ಅದ್ಯಾಕಜ್ಜಿ ಗೌರಮ್ಮ ಅಳ್ತಾ ಅಳ್ತಾ ಬತ್ತಾ ಅವ್ಳೆ" ಟೇಜು ಏನೇನೋ ವೂಹಿಸಲು ಹೋಗಿ, ಅದೆಲ್ಲಾ ಸರಿಯಾಗಿ ಬರದೆಯೇ ದೀನವದನಳಾಗಿ ಅಜ್ಜಿಯ ಮುಂದ ಕುಂತು ವೂರಣ ತಿರುವುತ್ತಿದ್ದ ಗುಂಡುಕಲ್ಲಿನತ್ತಲೇ ತನ್ನ ದೃಷ್ಟಿಯನ್ನೂ ತಿರುವುತ್ತಾ ಇದ್ದು ಬುಟ್ಟಳು.

"ಅದೇ ಕ ಟೇಜೂ. ಗೌರಮ್ಮ ತಮ್ಮ ತೌರೂರ್ಗೆ ಹಬ್ಬುಕ್ಕೆ ಹ್ವಾಗಭೈಕು ಅಂತಾಳೆ. ಸಿವಾ ನಗ್ತಾ ನಗ್ತಾ ವಾಗಿದ್ದು ಬಾ ಅಂದ್ರೆ ಆಯ್ತು, ಎಲ್ಲಾ ಸರಿ. ನಿಮ್ಮ ತೌರೋರು ಹಂಗೆ ಹಿಂಗೆ ಅನ್ಕಂಡು ನೀ ವ್ವಾಗಾದ್ ಬ್ಯಾಡಾ ಅಂತ ಜಗಳಾಡಿ ಗೌರಮ್ಮ ಅತ್ಕಂಡು ಕರ್ಕಂಡು ಹಂಗೂ ಹಿಂಗೂ ತೌರೂರ್ಗೆ ಬಂದ್ರೆ ಈ ಥರಾ ಮಳ ಬಂದು ಬುಡ್ತದೆ. ಗೌರಮ್ಮ ಅತ್ಗಂಡು ಬಂದಂಗೆ ಅಂತ ಅರ್ಥ" ಅಜ್ಜಿ ವಿವರಿಸ ತೊಡಗಿದ್ದರು.

"ನಿಂಗ್ ವೂರಣ ಬರಾದೆ ಯೆದ್ದೇಳು. ಮಳ ನಿಂತದೆ. ಇನ್ನು ಹೊರಡಾಂವು. ರಾವ್‌ಕಾಲ ಆ ಕಾಲ ಈ ಕಾಲ ಅಂತ ಯಿನ್ನು ಆ ಅಯ್ನೋರು ವಟಗುಟ್ತೋಯ್ತರೆ." ತಾತ ಚಡಾವು ಮೆಟ್ಟುತ್ತಾ ನುಡಿಯಲಾಗಿ ಟೇಜೂ ಸಟಕ್ಕನೆ ಯೆದ್ದು ಸಿಂತು ಮಳೆನೀರು ತನ್ನ ರೇಸುಮೆ ಲಂಗುವ ತಾಗದಂತೆ ಎಡಗೈಯಿಂದ ಮೊಣಕಾಲ ತನಕ ಮೇಲೆತ್ತಿ ದವಳಾಗಿ ಬಲಗೈಯಿಂದ ತಾತನ ಕೈ ಹಿಡಿದು ರಸ್ತೆಗಿಳಿದವಳಾಗಲು ಚಾವಡಿಯಲ್ಲಿ ಓಲಗದವರೂ ರಸ್ತೆಗಿಳಿದು ಅದೇ ಹಾದಿಯಲ್ಲಿ ಮುಂದುವರಿದಿದ್ದರು.

ಹಿಂದಿನ ವರುಸ ಇಟ್ಟಿದ್ದ ಗೌರಿಗೆ ಅಯ್ನೋರು ಸಂಸ್ಕಾರ ಮಾಡಿ ಅದರೊಡನೆ ಬಂದು ಚಾವಡಿಯಲ್ಲಿ ಸಾಂಗವಾಗಿ ಪ್ರತಿಷ್ಠಾಪಿಸಬೇಕಿತ್ತು. ಅದಕ್ಕೆ ಮುಂಚೆ ಟೇಜೂವಿನ ಮಾವ ಶಿವಲಿಂಗ 'ಗೌರಿ' ತರಲು ಕೆರೆಗೆ ಇಳಿದಿದ್ದ. ಕೆರೆಯ ಬಳಿ ಮುಖ್ಯಸ್ಥರೆಲ್ಲಾ

ನಿಂತು ನೋಡುತ್ತಿದ್ದರು. ಟೇಜೂ ಕೆರೆಯ ನೀರು ಪಾದಕ್ಕೆ ಮುಟ್ಟುವಂತೆಯೇ ನಿಂತಿದ್ದಳು. ಕೆರೆಗೆ ಮುಣುಗಿದ ಸಿವ್ಲಿಂಗ ಮಾವ ಬೊಗಸೆ ಮಣ್ಣಿನೊಡನೆ ಮೇಲೆ ಬಂದ.

"ಯಾತರ ಮೇಲೆ ಬಂದಳು ಗೌರಿ" ತಾತ ಆತಂಕದಿಂದ ಕೇಳಿದರು. "ಬಿದುರು ಕಣಪ್ಪಯ್ನೋ" ಸಿವ್ಲಿಂಗ ನುಡಿಯಲಾಗಿ "ನಿಂಗ್ ಮಾರಣ ಬರೋನೆ ಇನ್ನೊಂದಪ ಮುಣುಗು ಸರಿಯಾಗ್ ಕೈಯಾಡುಸಿ ತಗಂ ಬಾ ಮಾಳಾದ್ದೆ" ಸಂತಪ್ತ ಧ್ವನಿಯಲ್ಲಿ ಆದೇಶಿಸಿದ್ದರು. ಮೂರು ಭಾರಿಯೂ ಬಂದದ್ದು ಬೊಗಸೆ ಮಣ್ಣಿನೊಂದಿಗೆ ಬಿದಿರ ಚೂರು. "ಏನ್ ಅಯ್ನೋರೆ ಹಿಂಗಾಗ್‌ಬುಡ್ತು" ತಾತ ಪೆಚ್ಚಾಗಿ ನುಡಿದರು. "ಬಳಚೂರು, ಕರ್ಮಣಿ ಶಾಸ್ತ್ರಕ್ಕಾರೂ ಸಿಗ್ನಿಲ್ವಲ್ಲಾ." "ಏನ್ ಮಾಡೋದು ಗೌಡ್ರೆ ಎಲ್ಲಾ ಗೌರಮ್ಮ ತಾಯಿ ನೋಡ್ಕಂತಾಳೆ ಬಿಡಿ. ಅವಳ ಮುಂದೆ ನಾವೆಷ್ಟರವರು." ಅಯ್ನೋರು ಸಮಾಧಾನಿಸಿದ್ದರು.

ಗೌರಿಯನ್ನು ಪುಟ್ಟಿಯಲ್ಲಿರಿಸಿ ಪೂಜೆ, ಸಂಸ್ಕಾರಗಳನ್ನು ಮಾಡಿ ಎಲ್ಲರೂ ವಾಲಗ ದೊಂದಿಗೆ ಮರಡುವ ವೇಳೆಗೆ ತಾತನಿಗೆ ತಮ್ಮ ಕೈ ಬಿಡುವಾದದ್ದು ಅರಿವುಗೆ ಬಂದು "ನಮ್ ಟೇಜೂ ಯೆಲ್ಲೊಯ್ತು. ಸಿವ್ಲಿಂಗ ಎಲ್ಲುಂಡಾ ಅದು" ಎಂದು ಅತ್ತಿತ್ತ ಹುಡುಕಾಡ ತೊಡಗಿದ ಸಮಯಕ್ಕೆ ತಾತನ ಪಟ್ಟೆಯ ಬಳಿ ಪುಟ್ಟ ತಲೆಯೊಂದು ತಿವಿಯಲಾಗಿ ತಾತ ಕೆಳ ನೋಡಿದ್ದರು. "ಥತ್ ಥತ್ ಥತ್ತಾ. ಇದ್ಯಾನಾ ಇದು. ಈ ಮಣ್ಣ್ ಯಾಕ್ ಹಿಡ್ಕಂಡೆ ಮಾಳಾದ್ದೆ. ಅಯ್ಯಯ್ಯಾ ಲಂಗೆಯೆಲ್ಲಾ ಗಲೀಜ್ ಮಾಡ್ಕಂತಲ್ಲಪ್ಪಾ ಇದು" ಎಂದು ಮ್ಯಾಲೆ ವಡೆಯಲು ಹೋಗಲಾಗಿ ಅದರಿಂದ ತಪ್ಪಿಸಿ ಕೊಂಡ ಟೇಜೂ "ತಾತೋ ಬಳಗಾಜ ಜತೇಲಿ ಗೌರಿ ತಂದೀನಿ" ಎಂದು ಆತುರದಿಂದ ನುಡಿದಳು. ತಾತ ಬಾಗಿ ನೋಡಿದರು. ಬೊಗಸೆ ತುಂಬಿದ ಕೆರೆಯ ಕಪ್ಪು ಮಣ್ಣಿನ ನಡುವೆ ಮೊನ್ನೆ ಜಿನ ಸನಿವಾರ ಸಂತೇಲಿ ತಾವು ಕೊಡಿಸಿದ್ದ ಹೊಸ ಬಳೆಯ ಗಾಜಿನ ಚೂರುಗಳು ಲಕಲಕನೆ ಮಿನುಗುತ್ತಿದ್ದವು. ತಾತನ ಎತ್ತಿದ ಕೈ ಇಳುದುವೋಗಿತ್ತು.

* * * *

"ಯಾತರ ಮೇಲೆ ಬಂದ್ಳು ಗೌರಮ್ಮ" ಚಾವಡಿಯಲ್ಲಿ ಕಾದು ನಿಂತಿದ್ದ ಹೆಮ್ಮಕ್ಕಳ ನುಡಿಗಳಿಗೆಲ್ಲಾ ದನಿಯಾಗಿ ಅಜ್ಜಿ ನುಡಿದಿದ್ದರು. "ಬಿದಿರ ಮ್ಯಾಲೆಕ ಮಾದೇವಿ" ತಾತ ಸೋತ ಧ್ವನಿಯಾಗೆ ನುಡಿದಾಗ ಅಜ್ಜಿಯ ಮುಖ ಕಪ್ಪಿಟ್ಟಿತ್ತು. ಕರ್ಮಣಿ, ಬಳಗಾಜು ಶಾಸ್ತ್ರಕ್ಕಾದರೂ ಸಿಗಬಾರದೆ ? ಸಾವು ನೋವುಗಳ ತರುತ್ತೇನೆನ್ನುವ ಬಿದಿರ ಮ್ಯಾಲೇ ಗೌರಿ ಬರಬೇಕೆ ? ಆದರೂ ಅವರ ಬಾಯಿ ಇದಕ್ಕಿದ್ದ ಹಾಂಗೆ ಸಮಾಧಾನದ ನುಡಿ ಯಾಡಿತು. "ಹ್ವಾಗ್ಲಿ ಬುಡಿ ಇವೆಲ್ಲಾ ನಾವ್ ಮಾಡ್ಕಂಡಿದ್ದು ತಾನೆ. ಮುನಸ್ಸು ಸುದ್ದವಾದ್ರೆ ಎಲ್ಲವೂ ಸುದ್ದವೇ, ಎಲ್ಲೂ ಸುಭವೇ ಅಲ್ವಾ ಅಯ್ನೋರೆ" ಬಿಳುವು

ಮುಖದಲ್ಲಿ ಅರಿಸಿನ ಕುಂಕುಮಗಳ ರಾರಾಜಿಸುತ್ತಾ ನುಡಿದ ಅಜ್ಜಿಯ ಮಾತುಗಳ ಅಯ್ನೋರೂ ಹೌದೆಂದರು. ಗೌರಿಯ ಪ್ರತಿಷ್ಠಾಪನೆ ಸಾಂಗವಾಗಿ ನೇರವೇರಿತ್ತು.

ಗೌರಿ ಬಂದಳೆಂದು ಇಡೀ ಹಟ್ಟಿಯವರು ಮಧ್ಯಾಹ್ನ ನಾಕರ ತನಕ ವುಣ್ಣದೇ ಕುಂತು ವಿಧಿಯಿಲ್ಲದೆ ನಾಕರ ನಂತರ ವುಂಡರು. ಗಂಟಲಿಗೆ ವಬ್ಬಟ್ಟನ್ನು ತುರುಕಿ ತುರುಕಿ ನುಂಗಿದ ಟೇಜು ಅವ್ವ ಬರುವ ಹಾದಿಯನ್ನೇ ಕಣ್ಣು ತೂತಾಗುವಂತೆ ನೋಡಿ ನೋಡಿ ಸಾಕಾಗಿ ಕಣ್ಣು ಮುಚ್ಚಿದ್ದಳು.

ಟೇಜೂಗೆ ಎಚ್ಚರ-ಮಂಪರುಗಳ ಮಧ್ಯದ ಸ್ಥಿತಿ ಬಂದಾಗ ಮೋಡವಿಲ್ಲದ ಬಾನಿನಲ್ಲಿ ಚುಕ್ಕಿಗಳು ಮಿನುಗುತ್ತಿದ್ದವು. "ಯಾವಾಗ ಬಂದೆ ತಾಯಿ" ಅಜ್ಜಿಯ ಧ್ವನಿ. "ಯಾರು ಗೌರಿ ಬಂದಳಾ ? ಯಾತರ ಮ್ಯಾಲೆ ಬಂದ್ಳು ?" ಕಿರು ಕ್ಷಣದಿಂದ ತಾತಾ ಟವೆಲ್ಲು ವದರಿ ಹೊರಬಂದ ಸದ್ದು. ಬೆಳಗಿನಿಂದ ನುಡಿದು ನುಡಿದೂ ರೂಢಿಯಾಗಿದ್ದ ನಾಲಿಗೆ ಅಜ್ಜಿ ಬಾಯಲ್ಲಿ ನುಡಿಸಿಬಿಟ್ಟಿತ್ತು "ಬಿದಿರ ಮ್ಯಾಗ..."

ತಮ್ಮ ನಾಲಿಗೆ ಯಾನು ನುಡಿಯಿತೆಂದು ಅರಿವಾದ ತಕ್ಷಣ ಅಜ್ಜಿಯ ಕಂಗಳ ತುದಿಯಲ್ಲಿ ಮಗಳ ನೋಡಿ ಧಾವಿಸಿ ಬಂದು ಕುಂತಿದ್ದ ಕಣ್ಣೀರ ಹನಿಗಳು ಪಟಕ್ಕನೆ ಸುಕ್ಕುಗಟ್ಟಿದ ಕೆನ್ನೆಗಳ ಕಾಲುವೆಯಲ್ಲಿ ಹರಿದವು.

"ಬಿದಿರ ಮ್ಯಾಲೆಂತಾ ಯಾಕಂತಿಯವ್ವಾ ಕಾಲ ಮ್ಯಾಲೆ ಅನ್ನು. ಕಾಲ್ನಾಗೆ ನೀವು ಕೊಟ್ಟಿರಾ ಸಕ್ತಿ ಅದೆ. ದುಡುದ್ ತಿಂತೀನಿ."

ಅವ್ವನ ಗಟ್ಟಿ ದನಿ ಕೇಳಿದೊಡನೆ ಟೇಜೂ ಪಟಕ್ಕನೆ ಎದ್ದು ಕುಂತಳು. ಹಜಾರದಲ್ಲಿ ಅದೇ ತಾನೆ ಹೊತ್ತಿಸಿದ್ದ ದೀಪ, ಅವ್ವಾ, ಅಜ್ಜಿ, ತಾತಾ ಎಲ್ಲರೂ ಅವಳ ಕಣ್ಣ ಮುಂದಿದ್ದರು.

---

ಸಾಹಿತ್ಯ ಕ್ಷೇತ್ರದಲ್ಲಿ ದಲಿತ-ಬಂಡಾಯದವರ ಏರುದನಿಯ ಆಕ್ರಮಣಕಾರೀ ಮನೋಭಾವಕ್ಕೆ ಪ್ರತಿಯಾಗಿ, ನವ್ಯರು ಬಹುಪಾಲು ಪರೋಕ್ಷವಾಗಿ ಒಂದು ಬಗೆಯ ಸ್ವರಕ್ಷಣೆಯ ಸ್ವಸಮರ್ಥನೆಯ ಧಾಟಿ ಧೋರಣೆಯಲ್ಲಿ ಬರೆಯುವಂಥ ಒತ್ತಡಕ್ಕೆ ಒಳಗಾದಂತೆ ತೋರುತ್ತದೆ.. ಹೀಗಾಗಿ ಹೊಸ ಸೃಜನಶೀಲ ಪ್ರಯೋಗಗಳ ತುರ್ತನ್ನು ಎದುರಿಸಬೇಕಾದ ಆತಂಕ ಒತ್ತಡಗಳನ್ನು ನವ್ಯ ಕತೆಗಾರರು ಈ ದಶಕದಲ್ಲಿ ಅನುಭವಿಸಿದಂತೆ ತೋರುವುದಿಲ್ಲ ..

**ಜಿ. ಎಚ್. ನಾಯಕ್**

ಎಂಬತ್ತರ ದಶಕದ ಸಣ್ಣ ಕತೆಗಳನ್ನು ಕುರಿತು

---

ಸಾಹಿತ್ಯ ಸ್ಪರ್ಧೆ ಬಹುಮಾನಿತ ಕಥೆ

# "ಒಂದು... ಎರಡು... ಮೂರು"

**ಕೆ. ಆರ್. ಆನಂದ್**

ಮತ್ತೊಮ್ಮೆ ಸಮಯ ನೋಡಿಕೊಂಡೆ. ಅವಳು ಫೋನ್ ಮಾಡಿ ಈಗಿನ್ನೂ ಅರ್ಧಗಂಟೆ. 'ಮತ್ತೊಂದು ಗಂಟೆಯೊಳಗೆ ಬಂದಾಳು' ಎಂದುಕೊಂಡೆ. ಫೋನ್‌ನಲ್ಲಿ ಅವಳು ಹೆಚ್ಚೇನೂ ಹೇಳಿರಲಿಲ್ಲ. "ಸಂಜೆ ಬರ್ತೇನೆ ಶ್ರೀ. ಎಲ್ಲಿಗಾದರೂ ವಾಕ್ ಹೋಗಿಬಿಡಬೇಡ ಆಯ್ತೇ., ಕೆಲವೊಂದು ಅನಿವಾರ್ಯತೆಗೆ ಸಿಲುಕಿದ್ದೇನೆ ಶ್ರೀ... ಇಲ್ಲಿ ಮುಕ್ತವಾಗಿ ಏನೂ ಹೇಳಲಾರೆ". ಮತ್ತೆಷ್ಟೋ ಹೊತ್ತು ಹಾಗೇ ಕುಳಿತಿದ್ದೆ. ಹೊರಗೆ ಆಗಲೇ ಸಂಜೆಯಾಗಿರಬೇಕು. ರೂಮಿನಲ್ಲಿ ಸಧಾನ ಕತ್ತಲು ಹರಡತೊಡಗಿತ್ತು. ಆದರೂ ಎದ್ದು ಲೈಟ್ ಹಾಕಲು ಮನಸ್ಸಿಲ್ಲದೇ ಹಾಗೇ ಕೂತೆ. ಎಂತಹದೋ ವಿಚಿತ್ರ ಭಾವ ಎದೆಯಲ್ಲೆಲ್ಲಾ ಹರಡಿ ನಿಂತಂತೆ ಭಾಸವಾಗಿ ತಳಮಳವಾಗತೊಡಗಿತು. ಹೊಟ್ಟೆಯಲ್ಲೆಲ್ಲಾ ವಿಚಿತ್ರ ಸಂಕಟ ಪ್ರಾರಂಭವಾಗಿ ತಾಳಲಾಗದೇ ಎದ್ದು ಟೇಬಲ್ ಬಳಿ ಬಂದು ನಿಂತೆ. ಯಾವುದೋ ಸೆಮಿನಾರ್‌ಗೆಂದು ಸಿದ್ಧಪಡಿಸುತ್ತಿದ್ದ ಬರಹ ಹಾಗೇ ಆರೆತೆರೆದು ಬಿದ್ದಿತ್ತು. ಒಂದೆರಡು ಪುಸ್ತಕಗಳು, ತೆರೆದಿದ್ದವು ಧೂಳು ಮೆತ್ತಿದ ಹಾಳೆಗಳು, ಅಕ್ಷರಗಳು ಮಸುಕಾಗುವಷ್ಟು ಅಸ್ಪಷ್ಟವಾಗಿದ್ದವು. ಏನೂ ಮಾಡಲು ತೋಚದೆ ಸುಮ್ಮನೆ ಹಿಂತಿರುಗಿ ಮಂಚದ ಮೇಲೆ ಕುಳಿತೆ...

...ಹೌದು ಇಂತಹದೇ ಒಂದು ಸೆಮಿನಾರ್ ಅದು... ರೂಪ ಮೊದಲ ಬಾರಿಗೆ ಸಿಕ್ಕಿದ್ದು. ಆದಿನ ನನ್ನ ಪೇಪರ್ ಪ್ರಾಯಶಃ 'ಎಲ್ಲರಲ್ಲಿಯ ಸಂವೇದನೆ ಮತ್ತು ಸಾಹಿತ್ಯ' ಎಂದಿರಬೇಕು. ಸರಿಯಾಗಿ ನೆನಪಿಲ್ಲ. ಸೆಮಿನಾರ್ ಆರ್ಗನೈಸ್ ಮಾಡಿದವರು ಪರಿಚಯ ಕೇಳಿಕೊಂಡು ಮಾತಾಡುತ್ತಾ ನಿಂತಿರಬೇಕು, ಆಕೆ ಬಂದಳು. ತುಂಬು ಲವಲವಿಕೆಯ ಹುಡುಗಿ. ಕೊಂಚ ಗಿಡ್ಡದೆನ್ನಿಸುವ ಎತ್ತರ, ನಸುಗೆಂಪು ಬಣ್ಣ. ಮೊದಲ ನೋಟಕ್ಕೆ ಸುಂದರಿ ಎನ್ನಬಹುದು. ನಾನು ಆಗಿನಿಂದ ಸೆಮಿನಾರ್ ಪ್ರಾರಂಭವಾಗುವವರೆಗೆ ಗಮನಿಸಿದ್ದೆ ಆಕೆಯನ್ನು. ತೆಳು ಫ್ರೇಮಿನ ಕನ್ನಡಕದೊಳಗಿಂದ ಮಿನುಗುವ ಜೋಡಿ ಕಣ್ಣುಗಳು. ಪಾದರಸದ ಓಡಾಟ...ಕೊಂಚವೂ ಕೃತಕವೆನ್ನಿಸದಷ್ಟು ಸಹಜ ಹಾವಭಾವ. ಸ್ನಿಗ್ಧ ನಗು...ನೋಡುತ್ತಾ ನೋಡುತ್ತಾ ಯಾವಾಗಲಾದರೂ ಕಣ್ಣು ಕೂಡಿದರೆ

ತಟ್ಟನೇ ನಾಚಿಕೆ ಆವರಿಸಿ ತಪ್ಪಿತಸ್ಥನಂತೆ ತಲೆ ತಗ್ಗಿಸಿಬಿಡುತ್ತಿದ್ದೆ. ಆಗ ಅವಳ ನಗು ತುಂಟತನದಿಂದ ಕಿಚಾಯಿಸುತ್ತಿರುವಂತೆನ್ನಿಸಿ ಮತ್ತಷ್ಟು ಖಿನ್ನನಾಗಿದ್ದೆ...ಈಗ ನೆನಸಿಕೊಂಡರೆ ನಗು ಬಂದೀತು. ಆವಳೇ ಅಲ್ಲವೇ ಮೊದಲು ಪರಿಚಯಿಸಿಕೊಂಡವಳು.

'ಹಲೋ...ಐಯಾಮ್ ರೂಪ...' ಎಂಬ ಔಪಚಾರಿಕ ಪರಿಚಯದೊಡನೆ 'ನೀವು ಪ್ರೆಸೆಂಟ್ ಮಾಡ್ತಾಯಿದ್ದ ಕನ್ನಡ ತುಂಬಾ ಚೆನ್ನಾಗಿತ್ತು' ಎಂಬ ಹೊಗಳಿಕೆಯೊಂದಿಗೆ ಅನ್ನಿಸಿದ್ದ ಎಲ್ಲವನ್ನು ಪಟಪಟನೇ ಹೇಳಿಬಿಡುವ ಹುಡುಗಿ. ನನ್ನ ಪೇಪರ್‌ನ ಕೆಲವು ತಪ್ಪುಗಳ ಕೆದಕುವಂತೆ...'ನೋಡಿ...ಅಲ್ಲಿ ನಿಮ್ಮ ಅಭಿಪ್ರಾಯ ಹಾಗಿರಬಾರದಿತ್ತು ಎನಿಸುತ್ತೆ. ನಿಮ್ಮ ಅರ್ಥದಲ್ಲಿ ಪ್ರತಿ ವ್ಯಕ್ತಿಯ ಅಂತರ್ಗತ ಭಾವಾವೇಶಕ್ಕೆ ಸ್ಪಂದಿಸುವ ಪ್ರತಿಕ್ರಿಯೆ ಮಾತ್ರ ಸಂವೇದನೆ ಎಂದು ಕರೆಸಿಕೊಳ್ಳುತ್ತದೆ...ಆದರೆ ವ್ಯಕ್ತಿ ಎಷ್ಟೇ ನಿಕಟವಾಗಿದ್ದರೂ, ಆತ್ಮೀಯತೆಯಲ್ಲೂ ಅಂತರಂಗದ ಆಳ ಮುಟ್ಟದೇ ಹೋಗುವ ಸಹೃದಯತೆಗೂ ಸಂವೇದನೆಯಿಲ್ಲದ ಕೃತಕತೆ ಎನ್ನುವ ನಿಮ್ಮ ಮಾತನ್ನ ನಾನು ಒಪ್ಪಲಾರೆ...ಎನಿ ಹೌ. ನಿಮ್ಮ ಹೇಳಿಕೆಗಳನ್ನು ಸಾಧ್ಯವಾದಷ್ಟೂ ಸರಳವಾಗಿ ಹೇಳಿದ್ದರೆ ಒಳ್ಳೆಯದಿತ್ತು. ಪ್ರತಿ ವಾಕ್ಯದ ಸುತ್ತು ಬಳಸುಗಳನ್ನು ತುಳಿದು ವ್ಯಾಪಕವಾಗಿರುತ್ತಿತ್ತು.' ಅವಳು ನನ್ನನ್ನು ಬೈದಳೋ...ಹೊಗಳಿದ್ದಳೋ ಅರ್ಥವಾಗದೇ ಪೆಚ್ಚು ಸಗೆ ನಕ್ಕೆ ! ಆದರೂ ಈ ಎಲ್ಲ ಜನರ ನಡುವೆ ಕೊಂಚವಾದರೂ ಆತ್ಮೀಯಭಾವ ಕಂಡಿತ್ತು. ಅವಳಲ್ಲಿ.

ಹೊರಗೆ ಮತ್ತೂ ಕತ್ತಲು ಹರಡುತ್ತಿತ್ತು. ರೂಮಿನಲ್ಲಿ ತೀರಾ ಮುಸುಕು ಆವರಿಸಿ ಕಷ್ಟದಿಂದ ಕೊಂಚ ತಡೆಹಿಡಿದಿದ್ದ ಸಂಕಟ ತಲೆಯೆತ್ತಿ ಶೂನ್ಯಭಾವ ಆವರಿಸಿದಂತೆ ಭಾಸವಾಗತೊಡಗಿತ್ತು. ಈ ವೇಳೆಗೆ ಬರಬಹುದಿತ್ತು ಆಕೆ...ಈ ಹುಚ್ಚು ಸಂಕಟದ ಪರಿಧಿಯಿಂದ ಹೊರಬರಲು ಸಾಧ್ಯವಾಗುತ್ತಿತ್ತು ಎನ್ನಿಸಿ ಎದ್ದು ಹೊರಗೆ ಟೇರಸಿನ ಮೇಲೆ ಬಂದೆ. ಸೂರ್ಯ ಮುಳುಗಿ ನೀಲಾಕಾಶ ನಿಧಾನ ಯಾಮಿನಿಗೆ ತೆರವಾಗುತ್ತಿತ್ತು. ಕುರ್ಚಿಹಾಕಿ ಕುಳಿತು ಆಗಸಕ್ಕೆ ಮೊಗವಿಕ್ಕಿದೆ ಯಾಮಿನಿಯ ಸೆರಗಿಂದ ಪುಳಕ್ಕನೇ ಜಾರಿ ಅಂಬರದ ಅಂಗಳದಲ್ಲಿ ಮೂಡುತ್ತದ್ದ ಪುಟಾಣಿ ಚಿಕ್ಕೆಗಳು ಒಂದೊಂದಾಗಿ ಆಕಾಶ ತುಂಬುತ್ತಿದ್ದವು ಎಣಿಸತೊಡಗಿದೆ. ಒಂದು...ಎರಡು...ಮೂರು...ಎಂದಿನಂತೆ ನಕ್ಷತ್ರಗಳ ನಡುವೆ ಕರಗಿ ವಿಲೀನವಾಗದೇ ಅಮ್ಮನ ನೆನಪು ಕಾಡತೊಡಗಿ ಸಂಜೆಯಿಂದ ಎದೆಯಲ್ಲಿ ಹುಟ್ಟಿ ತಕಪಕ ಕುದಿಯುತ್ತಿದ್ದ ಅವ್ಯಕ್ತ ನೋವಿನ ಅಮೂರ್ತತೆಗೆ ಮೂರ್ತ ರೂಪ ಮೂಡತೊಡಗಿ, ತಲೆ ಮೇಲೆ ಮೂಡಿದ್ದ ಅಸಂಖ್ಯ ನಕ್ಷತ್ರಗಳ ನಡುವೆ ಅಮ್ಮ ನಡೆದಾಡತೊಡಗಿ ಎದೆಯ ಪದರ ಪದರಗಳಿಂದ ಹರಿಬಂದ ಸಂಕಟ ಆಕ್ರಂದನವಾಗಿ 'ಅವ್ಮಾ' ಎಂದು ಕಿರುಚಿದೆ. ಆಗಸಕ್ಕೆ ಏಣಿಯಿಟ್ಟು ದಡದಡನೇ ಏರತೊಡಗಿದರೂ ನಕ್ಷತ್ರದ ಚಪ್ಪರ, ನಡುವೆ ಅಮ್ಮನ ಹೆಜ್ಜೆ ಎಲ್ಲೂ ನಿಲುಕಲಾರದೇ ಮೇಲೆರತೊಡಗಿ ಎದೆ ಒತ್ತರಿಸಿ ಬಂತು.

...ಎಷ್ಟೊಂದು ನಕ್ಷತ್ರಗಳ ಸಂಜೆಗಳವು! ಅವಳ ಮಡಿಲಲ್ಲಿ ಮಲಗಿ ಎಂತಹದೋ ಸುಷುಪ್ತಿಯ ನಿದ್ದೆ...ಅರೆ ಮಂಪರು...ಅವಳು ಲಾಲಿ ಹಾಡಿದಂತೆ ಮೃದುವಾಗಿ 'ಮಗೂ ಅಲ್ಲಿ ನೋಡು ಎಷ್ಟೊಂದು ಚಿಕ್ಕಿಗಳು ? ಆಗಸಕ್ಕೆ ಮೂಡುತ್ತಾ...ಅಂಗಳಕ್ಕೆ ಚೆಲ್ಲಿದ ಅರಳಂತೆ...ಎಣಿಸು ನೋಡುವ ! ಒಂದು...ಎರಡು...ಮೂರು...ನೋಡು ನೋಡು ನಕ್ಷತ್ರಗಳ ನಭ ಕಳಚಿ ನಮ್ಮ ತಲೆಗೆಟುಕಿತೇ ? ಅಲ್ಲ, ನಾವೇ ಹಾರಿದ್ದೇವೆ ಅವುಗಳ ಕಡೆ...ಆ ಕರೀ ನೆರಳಲ್ಲಿ ಒಂದೊಂದೇ ಚಿಕ್ಕಿಗಳ ಹಿಡಿ...ನಡೆ, ಓಡು... ನಿನಗೇನೂ ಆಯಾಸವಾಗದು. ಎಂತಹ ಸುಮಧುರ ಕಂಪು ಚಿಕ್ಕಿಗಳ ನಡುವೆ...ಇಲ್ಲಿ ನಿನ್ನ ಮೈಯ ಬೆವರು ತೊಟ್ಟಿಕ್ಕುವುದಿಲ್ಲ...ಅದಕ್ಕಾಗಿ ಬಾಯ್ಬಿರಿದು ನಿಂತ ನೆಲ ನಿನ್ನ ಕೆಳಗಿಲ್ಲ...ಅರೆ ಇಲ್ಲಿ ನೋಡು ಚಂದ್ರಮನ ಬೆಳದಿಂಗಳ ಬೆಳಕಿಗೇ ಕರಗಿ ಹೋಗಿವೆ ಚಿಕ್ಕಿಗಳು...! ಕಾಡು ಚಂದ್ರಮನನ್ನು, ನಿನ್ನ ಚಿಕ್ಕಿಗಳ ಕರಗಿಸಿದ್ದಾನಲ್ಲ ಅವ...

'ಅಮ್ಮ ಸಿಕ್ಕಳೇನು ಶ್ರೀ ?' ಕಿವಿಯಲ್ಲಿ ಯಾರೋ ಪಿಸುಗುಟ್ಟಿದಂತೆನಿಸಿ ತಟ್ಟನೇ ಮಂಪರು ಹರಿಯಿತು. ನನ್ನ ಮುಖಕ್ಕೆ ಮುಖವಿಕ್ಕಿ ನಿಂತಿದ್ದಾಳೆ ರೂಪ !

'ಅರೆ ಯಾವಾಗ್ಬಂದೆ ? ನಿನ್ನ ಫೋನ್ ಬಂದಾಗಲಿಂದ ಕಾಯ್ತಿದ್ದೀನಿ, ಎಷ್ಟು ಹೊತ್ತು ? ಸಂಜೆಯ ಸಂಕಟ ತಡೀಲಾರ್ದೆ ಈ ನಕ್ಷತ್ರದ ನೆರಳಿಗೆ ಬಂದು ಕೂತಿದ್ದೆ...' ರೂಪ ಏನೂ ಹೇಳಲಿಲ್ಲ ..ಕೇವಲ ಸನ್ನೆಯಲ್ಲಿ ಹಿಂಬಾಲಿಸ ಹೇಳಿ ಕೆಳಗಿಳಿದು ಹೋದಳು. ಇಬ್ಬರೂ ಕೆಳಗಿದ್ದ ಅವಳ ಸೂಟ್‌ಕೇಸ್, ಪುಸ್ತಕದ ಟ್ರಂಕ್, ಹೋಲ್ಡಾಲ್ ಎತ್ತಿ ತಂದು ರೂಮಿಗೆ ಸೇರಿಸಿದೆವು. ನಾನು ಸುಮ್ಮನೇ ಕುರ್ಚಿಯಲ್ಲಿ ಕುಳಿತೆ. ರೂಪ 'ಟೀ ಮಾಡ್ತೇನೆ' ಅಂತ ಮೂಲೆಯ ಸ್ಟೌವ್ ಹಚ್ಚತೊಡಗಿದಳು. ಸ್ಟೌವ್‌ನ 'ಭರ್' ಶಬ್ದದ ಹೊರತು ಮತ್ತೆಲ್ಲ ಸ್ತಬ್ಧ.

ಟೀ ಕಪ್ ಹಿಡಿದು ಬಂದ ರೂಪ ಮಾತಾಡಲಾರಂಭಿಸಿದಳು. 'ಯಾಕೆ ? ಶ್ರೀ ಏನೂ ಮಾತಾಡ್ತಾನೇಯಿಲ್ಲ ? ಸಂಜೆ ಮತ್ತೆ ಸಂಕಟವೆಂದು ನಕ್ಷತ್ರಗಳಲ್ಲಿ ಕರಗಿದೆ. ಈಗ ನನ್ನ ಈ ಅನಿರಿಕ್ಷಿತಗಳಿಗೆ ಪ್ರಶ್ನೆಗಳೂ ಇಲ್ಲ ?'

'ಹಾಗೇನೂ ಇಲ್ಲ ರೂಪ. ನೀನೇ ಹೇಳ್ತಿ ಎಂದೇ ಕಾದಿದ್ದೆ. ಸಂಜೆ ಫೋನ್ ಮಾಡಿದಾಗಲೂ, ಕೆಲವು ಅನಿವಾರ್ಯತೆಗೆ ಸಿಲುಕಿದ್ದೇನೆ. ಈಗ್ಲೇ ಏನೂ ಹೇಳಲಾರೆ ಎಂದೆಯಲ್ಲ ನೀನು. ಈಗ ಹೇಳು ಏನು ವಿಷಯ ?'

'ಶ್ರೀ, ನೇರವಾಗಿ ಹೇಳ್ತೇನೆ ಎಲ್ಲ ..ಈವತ್ತು ಕೆಲಸಕ್ಕೆ ರಿಸೈನ್ ಮಾಡ್ದೆ. ಎಲ್ಲ ಗೊಂದಲ ಅನ್ನಿಸ್ತಿತ್ತು ನನಗೆ ಆಗ. ತಕ್ಷಣ ನಿನಗೆ ಫೋನ್ ಮಾಡಿ 'ಬಾ' ಎಂದು ಕರೀಬೇಕು ಅಂದುಕೊಂಡವಳು ಯಾಕೋ ಬೇಡ ಎಂದೇ ಸುಮ್ಮನಾದೆ. ಹಾಸ್ಟೆಲಿಗೆ ಹೋಗಿ ರೂಂ ಖಾಲಿ ಮಾಡಿ ಲಗೇಜ್ ಪ್ಯಾಕ್ ಮಾಡ್ದೆ. ಹಾಗಾಗೇ ಕೊಂಚ ತಡ ಆಯ್ತು. ಬಂದ ತಕ್ಷಣ ನೀನು ಕೇಳ್ತೀ ಎಂದುಕೊಂಡೇ ಲಗೇಜ್ ಎಲ್ಲ ನೋಡಿ ಯಾದ್ರೂ, ಆದ್ರೆ ನೀನು ಬಿಡು ಸಹಜ ಕುತೂಹಲವೂ ತಾಳದ ಮನುಷ್ಯ.'

"ರೂಪ ಇದರಲ್ಲೆಲ್ಲಾ ಔಪಚಾರಿಕತೆಯೇನು ? ನೀನು ಇದ್ದಕ್ಕಿದ್ದಂತೆ ಲಗೇಜ್ ಸಹಿತ ರೂಮಿಗೆ ಬಂದುದು, ಈಗ ಹೇಳಿದಂತೆ ಕೆಲಸಕ್ಕೆ ರಿಸೈನ್ ಮಾಡಿದ್ದು, ಹಾಸ್ಟೆಲ್ ಬಿಟ್ಟಿದ್ದು...ಎಲ್ಲ ಉತ್ತರ ಬೇಡುವ ಕೌತುಕದ ಪ್ರಶ್ನೆಗಳಲ್ಲ. ಏನೋ ಕ್ಲೀಷೆಯಿರಬೇಕೆಂದು ಸುಮ್ಮನಾದೆ...ಇವನ್ನೆಲ್ಲ ಕೇಳುವ ಕುತೂಹಲವೇ ಯಿಲ್ಲವೆಂದಲ್ಲ, ನಿನ್ನ ಮಾತಿಗೆ ಈ ಎಲ್ಲ ಸಣ್ಣ ವಿಷಯಗಳ ಪೀಠಿಕೆ ಬೇಡ ಅಂತ ಅಷ್ಟೆ. ಹೇಳು, ಬಂದ ಅಂತಹಾ ವಿಲಕ್ಷಣ ಪರಿಸ್ಥಿತಿಯಾದ್ರೂ ಏನು ?"

ರೂಪ ಸ್ವಲ್ಪ ಹೊತ್ತು ತಲೆ ಬಗ್ಗಿಸಿ ಮೌನವಾಗಿ ಕೂತಳು. ಶೂನ್ಯಭಾವದಿಂದ ಸಂಪೂರ್ಣ ಹೊರಬರದ ನಿಷ್ಕ್ರಿಯ ಮನದಿಂದ ಬಂದ ಮಾತುಗಳು ಕೊಂಚ ಕಠೋರವಾದುದು ಎನ್ನಿಸಿ ಬೇಸರ ಮೂಡಿತ್ತು.

"ಸರಿ ಶ್ರೀ, ಪೀಠಿಕೆಯಲ್ಲಿ ಕೊಂಚ ಹಿನ್ನೆಲೆಯೊಂದಿಗೆ ಪ್ರಾರಂಭಿಸುತ್ತೇನೆ. ನಿನ್ನೆ ಸಂಜೆಯಿಡೀ ತೀರಾ ಸಾಮಾನ್ಯ ಹುಡುಗಿಯಂತೇ ಎದುರಾದ ವಿಲಕ್ಷಣ ಪರಿಸ್ಥಿತಿಗೆ ಮರುಗಿದ್ದೆ... ನನಗಿದ್ದುದು ಎರಡೇ ದಾರಿ, ಬದುಕು ಅಥವಾ ಸಾವು. ಆದರೆ ಬದುಕುವ ಆಸೆಯಂತೂ ಕಮರಿಯೇ ಹೋಗಿತ್ತು, ಬೇರೊಂದು ಯೋಚನೆಯಿಲ್ಲದೇ ಸಾವಿನ ಕದ ಬಡಿಯಬೇಕೆಂದಿದ್ದವಳಿಗೆ ಕೊಂಚವಾದರೂ ನೆಲೆ ನೀಡಿದ್ದು ನಿನ್ನ ಪತ್ರ ಓದುತ್ತಾ, ಓದುತ್ತಾ ಸಾವಿನ ಮನೆಯಿಂದ ದೂರ ನಡೆದು ಬದುಕಿಗೆ ಬಂದೆ... ನಿನ್ನ ಅವೇ ಸಾಲುಗಳು...

...ನಿಜ ರೂಪ, ಮೊನ್ನೆ ನೀವಂದಂತೇ ನಿರ್ಭಾವುಕವಾಗಬೇಕೆಂದೇ ಅನ್ನಿಸುತ್ತಿದೆ. ಪ್ರತಿದಿನವೂ ಸಂಕಟ ಎದೆ ಹರಿದು ಹೊರಬರುವಂತೆ ಶೂನ್ಯಭಾವ ಆವರಿಸತೊಡಗಿದಾಗ ಮತ್ತೆ ನಕ್ಷತ್ರಗಳ ನೆರಳಿಗೇ ಬರ್‍ತೇನೆ, 'ಒಂದಲ್ಲ ಒಂದು ದಿನ ಅಮ್ಮ ಸಿಕ್ಕಾಳು ಎಂದೇ ಚಿಕ್ಕಿಗಳ ಎಣಿಸುತ್ತಾ ಕಾಯುತ್ತಿದ್ದೇನೆ. ಅದೇ ಸಂಜೆಗಳಿಗೆ ದಿನವಿಡೀ ನಿರಾಯಾಸ ದೂಡಿ ಬದುಕಿಬಿಡ್ತೇನೆ, ಸಂಜೆ ನಿನ್ನೆಗೆ ಸೇರಿ ನಾಳೆ ಬಳಿ ಬಂದಾಗ ಮತ್ತೊಂದು ಸಂಜೆಗೆ ಹೀಗೇ ನಡೆದುಬಿಡುತ್ತಿದ್ದೇನೆ. ಈ ತರಹದ ಬದುಕಿಗೂ ಯಾವುದಾದರೂ ಅರ್ಥವಿದೆಯೇ ಎಂಬ ಆತ್ಮವಿಮರ್ಶೆ ಮಾಡುವುದು ಈಗ ಬೇಡ, ಏಕೆಂದರೆ ಬದುಕಿಗೆ ಬಂದು ಅಪ್ಪಳಿಸಿದ ಎಲ್ಲ ಘಟನೆಯ ಹಿನ್ನೆಲೆ ಮತ್ತು ಅರ್ಥಶೋಧನೆ ಪೂರ್ಣವಾಗದ ಹೊರತು ಬದುಕು ತೀರಾ ಅಪೂರ್ಣ ನೋಡು...'

'ಅದಕ್ಕೆ ಶ್ರೀ, ಸಾವಿನ ಮನೆಯವರೆಗೆ ನಡೆದವಳು ಕದ ತಟ್ಟದೇ ಹಿಂತಿರುಗಿದೆ. ವಿಲಕ್ಷಣ ಪರಿಸ್ಥಿತಿ ಯಾವುದು ಎಂದೆಯಲ್ಲ, ನಿನಗೆ ಗೊತ್ತೇ ಇದೆ, ನನ್ನ ತಂದೆಯನ್ನು ಚಿಕ್ಕಂದಿನಲ್ಲೇ ಕಳೆದು ಕೊಂಡವಳು ನಾನು. ಅಮ್ಮ ಜೀವನದಲ್ಲಿ ಒಬ್ಬಳೇ ಏಗಲಾರದೇ 'ರಮೇಶ್‌ಬಾಬು'ವನ್ನು ಮದುವೆಯಾದಾಗ ನನಗಿನ್ನೂ ಐದೋ–ಆರೋ ವರ್ಷ. ನಂತರ ಬಹುಬೇಗ ಜೀವನ ಅರ್ಥವಾಗತೊಡಗಿತ್ತು ಶ್ರೀ. ಈ ಸಂಬಂಧಗಳ ಅರ್ಥ ಹೀನತೆ ಅರ್ಥವಾಗುವ ವೇಳೆಗೆ ಅಮ್ಮ ಮತ್ತು ನನ್ನ ನಡುವೆ ಬಿರುಕು ಕಂದಕವಾಗಿ

ಹೋಗಿತ್ತು. ಒಮ್ಮೊಮ್ಮೆ ಆಕೆಯೂ ಅಸಹಾಯಕಳು, ಸಿಲುಕುವಾಗ ತಿಳಿದಿಲ್ಲದೇ ವಿಲಪಿಸುತ್ತಿದ್ದಾಳೆ ಎನ್ನಿಸಿ ಅನುಕಂಪ ಮೂಡಿದರೂ, ಮತ್ತೆ ಮತ್ತೆ ಮನೆಯ ವಾತಾವರಣ ಹೇಸಿಗೆ ಹುಟ್ಟಿಸುತ್ತಿತ್ತು. ಕೊನೆಗೆ ಎಲ್ಲವನ್ನೂ ತೊರೆದು ಬರಲೆಂದು ತೀರ್ಮಾನಿಸಿದ್ದು, 'ರಮೇಶಬಾಬು'ವಿನ ಹಸೀ ಹಸೀ ಕಣ್ಣುಗಳು ಹದಿನೆಂಟರ ನನ್ನ ಮೇಲೆ ಹರಿಯತೊಡಗಿದಾಗ. ಆಗಲೇ ಅನ್ನಿಸ್ತು ಶ್ರೀ, ಈ ಬೌದ್ಧಿಕ ಸ್ತರ, ಈ ಶ್ರೀಮಂತ ಜೀವನದಲ್ಲಿ ಮೌಲ್ಯಗಳು ಮಲಿನತೆಯ ಮಡುವಿನಲ್ಲೇ ಮೊಳೆತಿರ್ತಾವೆ ಅಂತ. ಅಲ್ಲಿಂದ ಹೊರಬಂದೆ. ಮತ್ತೆ ಹೋರಾಟದ ಬದುಕಲ್ಲೂ ನಿಶ್ಚಿಂತೆಯಿತ್ತು. ಮೊನ್ನೆ ಹೊಸ ವರ್ಷದ ಮೊದಲ ದಿನದವರೆಗೆ .." ರೂಪ ಕೊಂಚ ಹೊತ್ತು ನೀರವತೆಗೆ ಕಂಬನಿದುಂಬಿ, ಮತ್ತೆ...

"...ಹೊಸ ವರ್ಷದ ದಿನವಿಡೀ ನಿನ್ನೊಂದಿಗೇ ಇದ್ದೆನಲ್ಲ, ಶ್ರೀ ಎರಡು ದಿನ ಬಿಟ್ಟು ನಮ್ಮ ಬಾಸ್ 'ದೇಸಾಯಿ, ಪಾರ್ಟಿಗೆ ಕರೆದ, ಆತನ ಒತ್ತಾಯಕ್ಕೆ, ಔಪಚಾರಿಕತೆಯ ಅನಿವಾರ್ಯಕ್ಕೆ ಮತ್ತಿಬ್ಬರೊಡನೆ ಹೋದೆ..." ಮತ್ತೆ ಒಂದಿಷ್ಟು ಹೊತ್ತು ಮೌನ, ಮತ್ತೆ ಮೂಕ ಮೌನ... ನನಗೆಲ್ಲಾ ಅರ್ಥವಾಗಿಹೋಗಿತ್ತು. ಅವಳಿಗೆ ಏನು ಹೇಳಲೆಂದೇ ತಿಳಿಯದೇ ಸ್ವಲ್ಪ ಹೊತ್ತು ಅವಳನ್ನೇ ನೋಡಿದೆ. ಮತ್ತೆ ಎದೆಯೆಲ್ಲಾ ಸಿಡಿದು ಬಂದ ಸಂಗತಿ ಹತ್ತಿಕ್ಕಲಾಗದೇ ಟೆರೇಸಿಗೆ ನಡೆದು ಸುಮ್ಮನೇ ನಕ್ಷತ್ರಗಳ ನಡುವೆ ಹೆಜ್ಜೆ ಹಾಕತೊಡಗಿದೆ.

ಎಷ್ಟೋ ಹೊತ್ತಿನ ನಂತರ ರೂಪ ನನ್ನ ಪಕ್ಕ ಕುರ್ಚಿ ಹಾಕಿ ಕುಳಿತವಳು ನಿಟ್ಟುಸಿರಿನೊಂದಿಗೆ ನಿಶ್ಶಬ್ದವಾಗಿದ್ದಳು.

"ಬೇಸರವಾಯ್ತೆ ರೂಪ ? ಔಪಚಾರಿಕವಾಗಿ ಏನಾದರೂ ಹೇಳಬಹುದಿತ್ತು ಏಕೋ ನಿನ್ನ ಬೌದ್ಧಿಕ ಸ್ತರದಲ್ಲಿ ಅದು ಅನಿವಾರ್ಯವೆನ್ನಿಸಲಿಲ್ಲ. ಅದಕ್ಕೆ ನನ್ನ ನಕ್ಷತ್ರದ ಕತೆ ಹೇಳಬಲ್ಲೆನಷ್ಟೆ." ಆಕೆಯ ಮುಖ ನೋಡಿದೆ, ಕೇಳುವಂತೆ ಕುಳಿತಳವಳು.

"ಅದೊಂದು ಬಯಲ ಹಳ್ಳಿ, ಬಯಲೇ ಬಯಲಾಗಿ ಬಿಸಿಲ ಚಪ್ಪರ ಹೊದ್ದದ್ದು. ಅದರೊಂದು ಪುಟ್ಟ ಮನೆ ನಮ್ಮದಿತ್ತು. ಅದರ ಇಡೀ ಬದುಕು, ಆ ಮನೆಯ ಗೋಡೆ ಗೋಡೆಯ, ಬಿರುಕು ಕೊರಕಿನ ಎಲ್ಲ ಸಂವೇದನೆ ನಮ್ಮಿಬ್ಬರ ನಡುವೆ ಹರಡಿಹೋಗಿತ್ತು. ಬದುಕು ನನ್ನ ಪಾಲಿಗೆ ನಿರಾಂತಕವಾಗಿಯೇ ಇತ್ತು. ಅಪ್ಪ ದೇಶಾಂತರ ಹೋಗುವ ಮುನ್ನ ಬಿಟ್ಟಿದ್ದ ಎರಡೆಕರೆ ಹೊಲದಲ್ಲಿ ಗೇಯ್ದು, ಅವರಿವರ ಹೊಲದಲ್ಲಿ ಬೆವರಿಳಿಸಿ ದಿನದ ಗಂಜಿ ಹುಟ್ಟಿಸುತ್ತಿದ್ದಳು ಅಮ್ಮ, ನನ್ನ ಪಾಡಿಗೆ ನಾನು ಯಾವುದಾದರೂ ಒಂಟಿ ಮಾವಿನ ಮರದ ಬುಡದಲ್ಲಿ ಕನಸು ಕಾಣುವಾಗ ಜೀವನದ ಅನುಭವಗಳು ಒಂದೊಂದಾಗಿ ಕಾಡಿಸತೊಡಗಿ ಮಣ್ಣಿನ ವಾಸನೆಗೆ ಹತ್ತಿರ ಹತ್ತಿರವಾಗುತ್ತಿದ್ದೆ. ಆದರೆ

ಅಮ್ಮನಿಗೆ ಅದು ಬೇಕಿರಲಿಲ್ಲ. ಅದಕ್ಕೆಂದೇ ಸಂಜೆ ನಕ್ಷತ್ರದ ನೆರಳಿಗೆ ಕೂಡಿಸಿ 'ನಕ್ಷತ್ರ ನೋಡು, ಎಂತಹ ಕಂಪು ಸುಂದರ... ಮಗಾ ನೀನು ಅಲ್ಲೇ ಇದ್ದುಬಿಡು. ಈ ನೆಲಕ್ಕೆ ಬೆವರಿಳಿಸೋದೇ ಬೇಡ. ಈ ವಾಸನೆ ಬೇಡ, ಈ ಜನಾ ಬೇಡ... ಹಾರು ನಕ್ಷತ್ರಗಳತ್ತ..."

ಪ್ರತಿ ಸಂಜೆಯು ಲಾಲಿಯಾಗಿತ್ತು ಅದು. ಹೀಗೇ ನನ್ನನ್ನು ಬದುಕಿಗೆ ಹತ್ತಿರವಿಟ್ಟು ಮಣ್ಣಿನಿಂದ ದೂರ ಮಾಡಿದ್ದಳು. ಮಣ್ಣು ಅನುಭವಗಳು ನೆಲದಿಂದ ಜಿಗಿದು ಬೆಳೆದರೂ ಮುಗಿಲು ಮುಟ್ಟದೇ, ಮುಗಿಲ ನಕ್ಷತ್ರಗಳು ಧರೆಗಿಳಿಯದೇ, ಅರೆಬರೆಯಲ್ಲೇ ಅಲೆದಾಡುತ್ತಿದ್ದಾಗ ಒಂದು ದಿನ ಸಂಜೆ ಮನೆಯ ಬಾಗಿಲು ದಬ್ಬಿದಾಗ ಅಮ್ಮ ಪರದಾಡುತ್ತಾ ಅಳುತ್ತಾ ಓಡುತ್ತಿದ್ದಳು. 'ಚಿಕ್ಕಪ್ಪ' ಎಂಬೋ ಸಂಬಂಧದ ವ್ಯಕ್ತಿ ಅವಳನ್ನು ಹಿಡಿಯಲು ಪರದಾಡುತ್ತಿದ್ದ. ನನ್ನ ಕಂಡವನೇ ತೆಪ್ಪಗೆ ಹೊರಟು ಹೋದ. ಅಮ್ಮ ಓಡಿ ಬಂದು ನನ್ನನ್ನಪ್ಪಿ, ಸಂಜೆಗೆ ಕರಗಿಸತೊಡಗಿದಳು. ಅವಳು ನಕ್ಷತ್ರದ ಲಾಲಿ ಹಾಡಿದರೂ, ಅವಳ ಚಿಂದಿ ಬಟ್ಟೆಯ ನೆರಳಲ್ಲಿ ನಕ್ಷತ್ರಗಳು ನನ್ನನ್ನು ಕರೆಯಲೇಯಿಲ್ಲ.' ಹೀಗೇ ನೋಡು ರೂಪ, ನನ್ನ ಅನುಭವಗಳು ಮೈವೆತ್ತದ್ದು, ಬದುಕು ಬೆಳೆದದ್ದು. ಆದರೆ... ಒಂದು ದಿನ ಸಂಜೆಯ ಲಾಲಿಗೆಂದು ಮನೆಗೆ ಬರುವ ವೇಳೆಗೆ ಅಮ್ಮ ನಕ್ಷತ್ರಗಳೆಡೆಗೆ ನಡೆದೇಬಿಟ್ಟಿದ್ದಳು ! ಬಿಳೀ ಬಟ್ಟೆ ಹೊದಿಸಿ ಮಲಗಿದವಳು ಎಲ್ಲರಿಗೂ ಆವತ್ತು ವಿಸ್ಮಯದ ಆದರೆ ನನಗೆ ನಿಜ ತಿಳಿದಿತ್ತು...ರೂಪ. ಅವಳ ಕೆನ್ನೆ ಮೇಲೆಯ ಗೀರು, ಎದೆಯ ಮೇಲಿನ ಹಲ್ಲು ಗುರುತು, ಕತೆ ಹೇಳಿದ್ದ ಕೇಳದಷ್ಟು ಮಣ್ಣಿನಿಂದ ವಿಮುಖನಾಗಿರಲಿಲ್ಲ ನಾನು. ಈಗ ಹೇಳು ರೂಪ, ಅಮ್ಮ ನಕ್ಷತ್ರದ ಚಪ್ಪರಕ್ಕೆ ನಡೆಯುವ ಅಗತ್ಯವಿತ್ತೇ ? ಹೀಗೆ ನನ್ನನ್ನು ದಿನಾ ಸಂಜೆಯ ತಕಪಕ ಕುಣಿಯುವ ಸಂಕಟಕ್ಕೆ ಬಿಟ್ಟು... "ಈಗ ನೀನು ಮಣ್ಣಿಗೆ ಕಾಲೂರಿ ನಿಂತಿದ್ದೀ, ನಿಂತುಬಿಡು ನನ್ನ ಸಲುವಾಗಿಯಾದರೂ..."

ನನ್ನ ಮಾತುಗಳು ಮುಗಿದರೂ ಆಕೆ ಮಾತಾಡಿರಲಿಲ್ಲ. ಕತ್ತಲು ತನ್ನಷ್ಟಕ್ಕೆ ತಾನು ಸರಿದು ಹೋಗುತ್ತಿತ್ತು.

ರೂಪ ಒಮ್ಮೆ ತಲೆಯೆತ್ತಿ ನೋಡಿದವಳು 'ಅರೆ ಅಲ್ಲಿ ನೋಡು' ! ಚದುರಿದ ನಕ್ಷತ್ರಗಳೆಲ್ಲ ಘನೀಕರಿಸಿ ನಿಂತಂತೆ, ಮಧ್ಯೆ ದುಡುದುಡನೇ ನಡೆವ ಹೆಜ್ಜೆಗಳು ! ಹೇ... ಅಲ್ಲಿ 'ಶ್ರೀ' ನಿನ್ನಮ್ಮ ! ?" ನಾನೂ ವಿಸ್ಮಯದಿಂದ ತಲೆಯೆತ್ತಿ ನೋಡಿದೆ. ಘನೀಕರಿಸಿದ ನಕ್ಷತ್ರದ ಮಳೆ ಬೀಳತೊಡಗಿತು. ಜೊತೆಗೇ ಅಮ್ಮನ ಪಾದಗಳೂ ನೆಲಕ್ಕೆ ಇಳಿಯುತೊಡಗಿದವು ! ಬರುಬರುತ್ತಾ ಬಿರುಸಾಗತೊಡಗಿತು ನಕ್ಷತ್ರದ ಮಳೆ. ಸುಮಧುರ ಕಂಪು, ಮಣ್ಣು ವಾಸನೆ ಸೇರಿ, ಆ ಉನ್ಮಾದದಲ್ಲಿ ದೂರದಲ್ಲಿ ನೆಲಕ್ಕೆ ಇಳಿಯುತ್ತಿದ್ದ ಅಮ್ಮನ ಪಾದಗಳನ್ನು ಕಂಡು ನಾನು ಓಡತೊಡಗಿದೆ. ರೂಪ

ನನ್ನೊಡನೇ ಓಡಿಬಂದಳು. ಪುಟ್ಟ ನಕ್ಷತ್ರಗಳ ಮೃದುವಾಗಿ ತುಳಿದು ಓಡುತ್ತಾ ನಮಗಿಬ್ಬರಿಗೂ, ನಗರದ ಅರೆನಗ್ನ ಜನ ಚೀರಾಡುತ್ತಾ ನಿಂತಿರುವುದ ಕಂಡು ಅಸಹ್ಯವೆನಿಸಿ ಅಮ್ಮನ ಪಾದ ಇಳಿದ ನೆಲ ಸಮೀಪಿಸುವ ವೇಳೆಗೆ, ರೂಪ ತನ್ನಷ್ಟಕ್ಕೆ ಬೀಳುವ ನಕ್ಷತ್ರಗಳ ಎಣಿಸತೊಡಗಿದಳು... ಒಂದು... ಎರಡು... ಮೂರು.

ಇಬ್ಬರೂ ಪಾದ ನಿಂತು ಅಮೂರ್ತವಾದ ನೆಲದಲ್ಲಿ ಕರಗಿಹೋದೆವು.

---

## ಜಿ. ಎಸ್. ಶೆಣೈ

ಜೆ. ಜೆ. ಕಲಾ ಶಾಲೆಯಲ್ಲಿ ತಮ್ಮ ಪ್ರಾರಂಭಿಕ ಶಿಕ್ಷಣ ಪಡೆದು, ಕಲಾವಿದರಾಗಿ ಸತತ ಸಾಧನೆ-ಅಧ್ಯಯನ ನಡೆಸಿದ ಜಿ. ಎಸ್. ಶೆಣೈ ಸಂಘಜೀವಿ. ಕರ್ನಾಟಕದ ಕಲಾರಂಗದ ಅನೇಕ ಸಾಂಘಿಕ ಚಟುವಟಿಕೆಗಳಲ್ಲಿ ಶೆಣೈ ಅವರದ್ದು ಸಿಂಹಪಾಲು. ವೆಂಕಟಪ್ಪ ಗ್ಯಾಲರಿಯ ಅಸ್ತಿತ್ವಕ್ಕೆ ಮೂಲ ಕಾರಣರಾಗಿ, 'ಕಲಾಮೇಳ', 'ಕಲಾ ಯಾತ್ರೆ'ಗಳ ಸಚೇತಕರಾಗಿದ್ದರು. 'ಕಾವಾ'ದಂತಹ ಬಗೆಹರಿಯದ ಸಮಸ್ಯೆಯನ್ನು ಕೈಗೆತ್ತಿಕೊಂಡು ಸುಧಾರಣೆ ತಂದಿದ್ದರು. ಈ ಕಲಾವಿದ ಒಮ್ಮೆಲೇ ಇಲ್ಲವಾದದ್ದು ಕಲಾಲೋಕಕ್ಕೆ ನಷ್ಟವೇ ಶೆಣೈ ಅವರಿಗೆ ಸಂಚಯದ ಶ್ರದ್ಧಾಂಜಲಿ.

---

## ಈ ಸಂಚಯದ ಲೇಖಕರು

○ **ಟಿ. ಜಿ. ರಾಘವ,** 507 (ಮಹಡಿ), 11ನೇ ಅಡ್ಡರಸ್ತೆ, ಪಶ್ಚಿಮ ಕಾರ್ಡ್ ರಸ್ತೆ, ಮಹಾಲಕ್ಷ್ಮೀಪುರ, ಬೆಂಗಳೂರು–560 086

○ **ಕಾ. ತಾ. ಚಿಕ್ಕಣ್ಣ,** ಕನ್ನಡ ಸಂಸ್ಕೃತಿ ಇಲಾಖೆ, ನೃಪತುಂಗ ರಸ್ತೆ, ಬೆಂಗಳೂರು–560 002

○ **ನೇಮಿಚಂದ್ರ,** 401, ವಿಜಯ್‌ಟವರ್ಸ್ 2ನೇ ಮೇನ್ ಆರ್. ಪಿ. ಸಿ. ಲೇಔಟ್, ವಿಜಯನಗರ ಎರಡನೇ ಹಂತ ಬೆಂಗಳೂರು–560 0040

○ **ನಾ. ಡಿಸೋಜ,** 15/14 2ನೇ ಕ್ರಾಸ್, ನೆಹರೂನಗರ, ಸಾಗರ–577401

○ **ವಾಸುದೇವನಾಡಿಗ್,** 5ನೇ ಕ್ರಾಸ್, ರವೀಂದ್ರನಗರ ಶಿವಮೊಗ್ಗ–577201

○ **ಎಂ. ಎಸ್. ವೇದಾ,** ನಂ. 643, ಬಸವೇಶ್ವರ ರಸ್ತೆ ಫೋರ್ಟ್‌ಮೊಹಲ್ಲಾ ಮೈಸೂರು–570 004

○ **ಕೆ. ಆರ್. ಆನಂದ್,** C/o ಎನ್. ಎಸ್. ಸೀತಾರಾಮರಾವ್ 7/567 4ನೇ ಕ್ರಾಸ್ ಕೆ. ಬಿ. ಬಡಾವಣೆ, ದಾವಣಗೆರೆ–577002

○ **ವೆಂಕಟ್ರಮಣಗೌಡ,** ಅಂಚೆ : ಅಗಸೂರು–581413 ಅಂಕೋಲಾ ಉ.ಕ.

○ **ಕೆ. ಸತ್ಯನಾರಾಯಣ,** 503/1, Central Revenue Quartress, 15th Main Annanagar MADRAS–40

SANCHAYA No. MAG (2) PRB-DECL 309/94-95

## ಈ ಸಂಚಯದಲ್ಲಿ..



SANCHAYA 24/D 1/th Main Muneshwara Block G.E.F. Post
Bangalore-560 026 Karnataka.